# व्रतानुष्ठानपद्धतिः

# ವ್ರತಾನುಷ್ಠಾನ ಪದ್ಧತಿ

( ವೈಷ್ಣವ-ಮಾಧ್ವ ಹಾಗೂ ಇತರ ವರ್ಗದವರಿಗೂ
ವ್ರತಗಳ ಕ್ರಮವನ್ನು ಶಾಸ್ತ್ರೀಯ ಪದ್ಧತಿಯಲ್ಲಿ
ತಿಳಿಸುವ ಏಕೈಕ ಗ್ರಂಥ )

ಸಂಗ್ರಾಹಕರು:
...ರ್ವೇದಿ ವಿದ್ವಾನ್ ಎಸ್. ವೇದವ್ಯಾಸಾಚಾರ್ಯ, ಎಂ.ಎ.,

|| सर्वतोभद्रम् ||



ಪ್ರಕಾಶನ:
ಚತುರ್ವೇದಿ ಪ್ರಕಾಶನ
ಭಾಗವತ ಮಂದಿರ... 22ನೇ ...
[illegible]

# व्रतानुष्ठानपद्धतिः

# ವ್ರತಾನುಷ್ಠಾನ ಪದ್ಧತಿ



(ವೈಷ್ಣವ-ಮಾಧ್ವ ಹಾಗೂ
ಇತರ ವರ್ಗದವರಿಗೂ ವ್ರತಗಳ
ಕ್ರಮವನ್ನು ಶಾಸ್ತ್ರೀಯ ಪದ್ಧತಿಯಲ್ಲಿ ತಿಳಿಸುವ ಏಕೈಕ ಗ್ರಂಥ)

*ಸಂಗ್ರಾಹಕರು:*

ಚತುರ್ವೇದಿ ವಿದ್ವಾನ್ ಎಸ್. ವೇದವ್ಯಾಸಾಚಾರ್ಯ, ಎಂ.ಎ., ಬಿ.ಇಡಿ.



ಪ್ರಕಾಶನ:

**ಚತುರ್ವೇದಿ ಪ್ರಕಾಶನ**

184, ಭಾಗವತ ಮಂದಿರಮ್, 22ನೇ ಮುಖ್ಯ ರಸ್ತೆ
12 ನೇ 'A' ಅಡ್ಡ ರಸ್ತೆ ರಾಘವೇಂದ್ರ ಲೇ ಔಟ್
ಪದ್ಮನಾಭನಗರ, ಬೆಂಗಳೂರು - 560 070.
ಫೋನ್: 6699184

Vrathanustana Paddathi by
Chaturvedi Vidwan S. VEDAVYASACHARYA, M.A., B.Ed.



**Edition : 2001**

**Price : Rs. 150-00**

Printing & Type Setting by :
**JAYANTH PRINTERS**
Azadnagar, Chamarajpet
Bangalore-560 018. Ph: 6758874



ಮುದ್ರಣ : 2001

ಪ್ರತಿಗಳು : 1000



ಬೆಲೆ : ರೂ. **150-00**

*ಮುದ್ರಕರು ಹಾಗು ಅಕ್ಷರ ಸಂಯೋಜನೆ :*
**ಜಯಂತ್ ಪ್ರಿಂಟರ್ಸ್**
ಆಜಾದ್‌ನಗರ, ಚಾಮರಾಜಪೇಟೆ
ಬೆಂಗಳೂರು - 560 018
ಫೋನ್ : 6758874

# ಪರಿವಿಡಿ

# ಶ್ರೀರಸ್ತು

**ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತೀಃ ಪ್ರಬೋಧಯನ್।**
**ಏಕ ಏವ ಮಹಾಬಾಹುಃ ಕುರುತೇ ಸರ್ವಮಂಜಸಾ॥**

ಎಂಬ ಆಚಾರ್ಯರ ಉಕ್ತಿಯಂತೆ ಪ್ರತಿಯೊಂದು ದೇವತೆಗಳಲ್ಲಿ ಅಂತರ್ಯಾಮಿಯಾಗಿರುವ ಚರಾಚರ ಪ್ರಪಂಚನಿಯಾಮಕನಾದ ಸಕಲಶಕ್ತಿಗಳಿಗೆ ಕೇಂದ್ರಬಿಂದುವಾಗಿರುವ ಭಗವಂತನಿಗೆ ಸಕಲ ಪೂಜೆಗಳೂ ಸಲ್ಲುತ್ತಿರುತ್ತವೆ.

ಗಣಪತಿಯಲ್ಲಿರುವ ಇಂದ್ರಿಯಗಣಗಳಿಗೆ ಅಧಿಪತಿಯಾದ ಹೃಷಿಕೇಶನೆ ಗಣಪತಿ ಶಬ್ದವಾಚ್ಯನಾಗಿದ್ದು ಗಣಪತಿಯಲ್ಲಿರುವ ವಿಘ್ನನಿವಾರಕತ್ವ ಶಕ್ತಿಯನ್ನು ಆ ತತ್ತ್ವದ ಮೂಲಕ ಉಪಾಸಕರಿಗೆ ನೀಡುವವನೂ ಭಗವಂತನೆ ಆಗಿರುವನು.

ಹಾಗೆಯೇ ಸೂರ್ಯನೆಲ್ಲಿರುವ ದಾಹಕತ್ವ ಶಕ್ತಿಯೂ ಭಗವಂತನದೆ ಸೂರಿಗಳಿಂದ ಗಮ್ಯನಾದ್ದರಿಂದಲೂ ಮುಖ್ಯತಃ ಸೂರ್ಯ ಶಬ್ದವಾಚ್ಯನು ವಿಷ್ಣುವೇ. ಹೀಗೆಯೇ ಯಾವುದೇ ದೇವತೆಯ ಉಪಾಸನೆ ಮಾಡುವ ಉಪಾಸಕನು ಅಂತರ್ಯಾಮಿತ್ವವನ್ನು ಗುರುತಿಸಿಕೊಂಡು ಭಗವಂತನಿಗೆ ಪೂಜೆ ತಲುಪುವಂತೆ ಆರಾಧಿಸಿದರೆ ಮಾತ್ರ ಮುಖ್ಯಫಲಕ್ಕೆ ಭಾಗಿಯಾಗುವನು.

ಈ ನಿಟ್ಟಿನಲ್ಲಿ ಶ್ರೀಮದಾಚಾರ್ಯರು ಗೋಲಕತ್ರಯ ಚಿಂತನವನ್ನು ತಿಳಿಸಿ ಅಂತರ್ಯಾಮಿತ್ವದ ಮಹತ್ವವನ್ನು ಹೆಚ್ಚಿಸಿರುವರು. ಯಾವುದೇ ದೇವತೆಯ ಉಪಾಸನೆಯು ನಡೆಯುವಾಗ ಪ್ರಕೃತವಾದ ದೇವತೆಯ ಪ್ರತೀಕ, ನಂತರ ಆ ಪ್ರತೀಕದ ನಿಯಾಮಕರಾದ ವಾಯುತತ್ತ್ವ, ನಂತರ ಸರ್ವಪ್ರೇರಕನಾದ ಭಗವಂತನ ಉಪಾಸನೆಯು ನಡೆಯಬೇಕು.

ವಾಯುತತ್ತ್ವವಾದರೂ ಉಪಾಸಕ ಹಾಗೂ ಉಪಾಸ್ಯ ದೇವತೆಯ ಮಧ್ಯ ಸೇತುವೆಯಂತಿರುವುದು. ಅಲ್ಲದೆ ಉಪಾಸಕನು ಮಾಡಿರುವ ಪೂಜೆಯನ್ನು ಭಗವಂತನಿಗೆ ತಲುಪಿಸುವರು. ಇದನ್ನೇ ಉಪನಿಷತ್ತು

**"ತಸ್ಮಿನ್ನಪೋ ಮಾತರಿಶ್ವಾ ದದಾತಿ"** ಎಂದಿದೆ.

ಈ ಕಾರಣದಿಂದಲೇ ಪ್ರತಿಯೊಂದು ಕರ್ಮಗಳಲ್ಲೂ "ಭಾರತೀರಮಣ ಮುಖ್ಯ ಪ್ರಾಣಾಂತರ್ಗತ" ಎಂದು ಹೇಳುವುದು ವಾಡಿಕೆಯಲ್ಲಿದೆ.

ಪ್ರತಿಯೊಂದು ಮತದವರು ಈ ವಿಷಯವನ್ನು ಮನಗಂಡು ಆಚರಿಸಿದರೆ ಭಗವಂತನು ಸುಪ್ರೀತನಾಗುವನು.

ಯಾವುದೇ ವ್ರತದ ಕೊನೆಯಲ್ಲಿಯೂ ತಮಗೆ ಅರಿವಿದ್ದೊ ಅರಿವಿಲ್ಲದೆಯೋ "ಶ್ರೀಕೃಷ್ಣಾರ್ಪಣಮಸ್ತು" ಎಂದು ಹೇಳಿ ಭಗವಂತನಿಗೆ ಅರ್ಪಿಸುವುದಿದೆ. ಹಾಗೆಯೇ ಸಂಧ್ಯಾವಂದನೆಯ ಕಡೆಯಲ್ಲಿಯೂ.

**ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ।**
**ಸರ್ವದೇವನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ॥**

ಎಂದು ಹೇಳಿ ಸಂಧ್ಯಾವಂದನೆಯಲ್ಲಿ ಉಪಾಸಿಸಲಾಗುವ ಇಂದ್ರಾದಿ ದೇವತೆಗಳ ಹಾಗೂ ಜಲಾಭಿಮಾನಿ ದೇವತೆಗಳ ವಂದನೆಯನ್ನು ಭಗವಂತನಿಗೆ ಸೇರಲಿ" ಎಂದು ತಿಳಿಸುವ ಶ್ಲೋಕವಲ್ಲಿ ನದಿಗಳೆಲ್ಲವೂ ಸಾಗರವನ್ನು ಸೇರುವಂತೆ ಸರ್ವದೇವತೆಗಳಿಗೆ ಮಾಡಿದ ನಮಸ್ಕಾರಾದಿಗಳು ಕೇಶವನಿಗೆ ಸೇರುತ್ತದೆ" ಎಂದು ದೃಷ್ಟಾಂತ ಪೂರ್ವಕವಾಗಿ ವಿವರಿಸಲಾಗಿದೆ. ಭಾಗವತದಲ್ಲಿ ಈ ಮಾತು ಬಂದಿದೆ.

**ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ**
**ಗುಹಾಶಯಾಯೈವ ನ ದೇಹಮಾನಿನೇ॥**

ಈ ವಿಚಾರಾದಿಗಳನ್ನು ವಿಮರ್ಶಿಸಿದಾಗ ಶ್ರೀಮದಾಚಾರ್ಯರು ಯಾವುದೇ ವಿಚಾರವನ್ನು ಪ್ರಮಾಣವಿಲ್ಲದೆ, ಆಗ್ರಹ ಪೂರ್ವಕವಾಗಿ ಹೇಳುತ್ತಿರುವರು ಎಂದು ತಿಳಿಯಲಾಗದು. ಪ್ರಮಾಣಪೂರ್ವಕವಾಗಿಯಷ್ಟೇ ಆಚಾರ್ಯರು ತಿಳಿಸಿರುವರು. ಎಂದು ತೀರ್ಮಾನಿಸಬಹುದು.

## ದೇವನೊಬ್ಬ ನಾಮ ಹಲವು

ಸಕಲ ದೇವತೆಗಳ ನಾಮಗಳನ್ನು ಧರಿಸಿವವನು ಭಗವಂತನೆಂದು ಆಚಾರ್ಯರು ತಿಳಿಸಿದ್ದಾರೆ. ಶ್ರುತಿಯೂ ಹಾಗೆ ಹೇಳುತ್ತದೆ.

**"ಯೋ ದೇವಾನಾಂ ನಾಮಧಾ ಏಕ ಏವ"**

ಆದ್ದರಿಂದ ಅಂತರ್ಯಾಮಿ ವಿವಕ್ಷೆಯಿಂದ ಆಯಾಯ ಪ್ರತೀಕಗಳಲ್ಲಿ ಪೂಜಿಸಿದರೆ ಭಗವಂತನು ಸಂತುಷ್ಟನಾದರೆ ಇತರ ಸಕಲ ಭಗವಂತನ ಪರಿವಾರ ದೇವತೆಗಳೆಲ್ಲರೂ ತೃಪ್ತರಾಗುವರು. ಭಗವಂತನನ್ನು ಮರೆತು ಕೇವಲ ಸೂರ್ಯಾದಿ ದೇವತೆಗಳನ್ನು ಮಾತ್ರ ಪೂಜಿಸಿದರೆ ಕೊಂಬೆಗಳಿಗೆ ನೀರೆರೆದಂತಾಗಿ ಫಲಗಳಿಂದ ವಂಚಿತರಾಗುವೆವು. ಭಗವಂತನಿಗೆ ಪೂಜೆಯನ್ನು ಆಯಾಯ ಪ್ರತೀಕದಲ್ಲಿ ಅರ್ಪಿಸಿದರೆ ಜಗದ್ವೃಕ್ಷದ ಮೂಲದಂತಿರುವ ಭಗವಂತನಿಗೆ ಸೇರಿ ಶಾಖೋಪಶಾಖೆಗಳೂ ತೋದು ಉಬ್ಬಿ ಫಲಭರಿತವಾಗುವುವು.

**ಯಥಾ ಹಿ ಸ್ಕಂಧಶಾಖಾನಾಂ ತರೋರ್ಮೂಲಾವಸೇಚನಂ।**
**ಏವಮಾರಾಧನಂ ವಿಷ್ಣೋಃ ಸರ್ವೇಷಾಮಾತ್ಮನಶ್ಚ ಹಿ॥**

ಭಗವಂತನ ಸ್ಮೃತಿ ಇರದ ಕರ್ಮವು ಆಸುರವೆನಿಸಿ ದುಷ್ಫಲವೆ ಲಭಿಸುವುದು.

**ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದಾಸುರೀ ಮತಾ।**

ಪರಮ ವಿಷ್ಣುಭಕ್ತರಾದ ಗಣಪತ್ಯಾದಿ ದೇವತೆಗಳು ಪೂಜಕರು ತಮಗೆ ಅರ್ಪಿಸಿದ ಪೂಜೆಯನ್ನು ತಮಗೆ ನಿಯಾಮಕನಾದ ದೇವದೇವನಲ್ಲಿ ಅರ್ಪಿಸಿ ಬಿಡುವರು. ಇದನ್ನು ಬ್ರಹ್ಮಕಾಂಡ ಗರುಡ ಪುರಾಣವು ತಿಳಿಸಿದೆ.

**ನಿವೇದಯಿತ್ವಾ ಪರದೇವತಾಯೈ।**

ಯಾರು ಅನ್ಯದೇವತೆಗಳ ಭಕ್ತರಾಗಿದ್ದು ಶ್ರದ್ಧೆಯಿಂದ ಅವರನ್ನು ಪೂಜಿಸುವವರೋ ವಿಧಿವತ್ತಾಗಿ ಅಲ್ಲದಿದ್ದರೂ ಕಡೆಗೆ ನನ್ನನ್ನೇ ಪೂಜಿಸುವರು. ಆದರೆ ಬೇರೆ ದೇವತೆಗಳ ಆರಾಧನೆಯನ್ನು ಸ್ವೀಕರಿಸುವವನು ಭಗವಂತನೇ ಎಂಬ ಜ್ಞಾನರಹಿತರಾಗಿರುವರು. ಆದ್ದರಿಂದ ಅವರಿಗೆ ನಶ್ವರವಾದ ಸ್ವರ್ಗಾದಿಗಳು ಫಲವಾಗಿ ಲಭಿಸುವುವು. ಜ್ಞಾನಪೂರ್ವಕವಾಗಿ ಆರಾಧನೆ ಮಾಡುವವರಿಗೆ ಶಾಶ್ವತವಾದ ಫಲವು ಲಭಿಸುವುದು.

ಅಶ್ವಮೇಧಾದಿಯಾಗಗಳನ್ನು ಮಾಡಿದರೂ ಆಯಾಯ ಯಾಗಗಳಿಗೆ ಪರಮಾತ್ಮನೇ ದೇವತೆಯೆಂದು ತಿಳಿದು ಅವನನ್ನೇ ಉಪಾಸಿಸಬೇಕು. ಇತರ ದೇವತೆಗಳನ್ನು ವಿಷ್ಣುವಿನ ಭಕ್ತರೆಂಬ ಭಾವನೆಯಿಂದಲೇ ಗೌರವಿಸಬೇಕು. ಈ ಮಾರ್ಗವು ಶ್ರೇಷ್ಠಮಾರ್ಗವಾಗಿದೆ. ಇದನ್ನೇ

**ಅಶ್ವಮೇಧಾದಿಭಿರ್ಯಜ್ಞೈರಪಿ ಕೇಶವಯಾಜಿನಃ।**
**ವೈಷ್ಣವಾ ಇತಿ ಬುದ್ಧ್ಯೈವ ಮಾನಯಂತ್ಯನ್ಯದೇವತಾಃ॥**

ಏಕೆಂದರೆ ಎಲ್ಲ ಯಜ್ಞಯಾಗಗಳ ಫಲಭೋಕ್ತೃ ಭಗವಂತನೆ ಆಗಿರುವನು.

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ।**

ಅನ್ಯದೇವತೆಗಳ ಪೂಜೆಯನ್ನು ಮಾಡಿದರೂ ಅಂತ್ಯದಲ್ಲಿ ಭಗವಂತನಿಗೆ ಸಮರ್ಪಣೆಯನ್ನು ಮಾಡಲ್ಪಟ್ಟಾಗಲೇ ಸ್ವರ್ಗಾದಿಫಲವು ಲಭಿಸುವುದು ಇಲ್ಲದಿದ್ದರೆ ಇಲ್ಲ. ಆದ್ದರಿಂದ ಅಂತಹ ಶ್ರೀಹರಿಯನ್ನು ಪೂಜಿಸಬೇಕು ಎಂದು ಆಗ್ನೇಯದಲ್ಲಿ ಹೇಳಲಾಗಿದೆ.

**ಅನ್ಯದೇವತಾ ಪೂಜಾಪಿ ಯಸ್ಮಿನ್ನಂತೇ ಸಮರ್ಪಿತಾ।**

**ಸ್ವರ್ಗಾದಿ ಫಲಹೇತುಃ ಸ್ಯಾತ್ ನಾನ್ಯಥಾ ತಂ ಭಜೇದ್ ಹರಿಮ್॥**

ಈ ಮೇಲೆ ಹೇಳಿದಂತೆ ಯಾವುದೇ ಅನ್ಯ ದೇವತೆಯನ್ನು ಉಪಾಸಿಸುವಾಗಲೂ ತದಂತರ್ಗತನಾದ ಭಗವಂತನ ಪೂಜೆಯನ್ನು ಮಾಡಿದರೆ ಮಾತ್ರ ಐಹಿಕ ಪಾರತ್ರಿಕ ಲಾಭವೆಂದು ತಿಳಿದು ಶುದ್ಧ ವೈಷ್ಣವ ಸಂಪ್ರದಾಯಕ್ಕೆ ಅನುಸಾರಿಯಾಗಿವೆಂಬ ವ್ರತಾನುಷ್ಠಾನ ಪುಸ್ತಕವನ್ನು ಸಜ್ಜನರಿಗಾಗಿ ಬರೆಯಲಾಗಿದೆ.

ಈ ಗ್ರಂಥದಲ್ಲಿ ಗಣೇಶಪೂಜೆ, ಗೌರಿಪೂಜೆ, ವರಮಹಾಲಕ್ಷ್ಮೀಪೂಜೆ ಮೊದಲಾದ ಪೂಜೆಗಳನ್ನು ವೈಷ್ಣವ ಪದ್ಧತಿಯಿಂದ ಹೇಗೆ ಪೂಜೆ ಮಾಡಬೇಕೆಂದು ಸ್ಪಷ್ಟವಾಗಿ ವಿವರಿಸಿ ಬರೆಯಲಾಗಿದೆ.

ವ್ರತಗಳನ್ನು ಆಚರಿಸುವಾಗ ಸಂಕಲ್ಪದ ಕ್ರಮ ಹೇಗೆ? ಅಂಗಪೂಜೆ, ಪತ್ರಪೂಜೆ, ನೈವೇದ್ಯಾದಿಗಳಲ್ಲಿ ಕಂಡು ಬರುವ ವ್ಯತ್ಯಾಸಗಳನ್ನು ಸಂಗ್ರಹಿಸಲಾಗಿದೆ. ಅಲ್ಲಲ್ಲಿ ಅವಶ್ಯವಾಗಿ ಹೇಳಲೇಬೇಕಾದ ವಿಷಯಗಳನ್ನು ಅಡಿ ಟಿಪ್ಪಣಿಯಲ್ಲಿ ಬರೆಯಲಾಗಿದೆ.

ಗ್ರಂಥಕ್ಕೆ ಈ ಹಿಂದೆ ಸಜ್ಜನರ ಹಸ್ತ ಸೇರಿರಿವ "ಚೈತ್ರಾದಿಮಾಸಕರ್ತವ್ಯ" ಎಂಬ ಗ್ರಂಥವು ಪೂರ್ವಭಾವಿಯಾಗಿ ಸಿದ್ಧತೆಯನ್ನು ಒದಗಿಸುತ್ತದೆ.

ಈಗಾಗಲೇ ವ್ರತರತ್ನಾದಿಗ್ರಂಥಗಳು ಮುದ್ರಿತವಾಗಿರುವಾಗ ಈ ಗ್ರಂಥದ ಅವಶ್ಯಕತೆ ಏನು? ಎಂಬ ಪ್ರಶ್ನೆ ಉದ್ಭವಿಸಬಹುದು. ಆದರೆ ವೈಷ್ಣವಪದ್ಧತಿಯಲ್ಲಿ ವ್ರತಗ್ರಂಥಗಳು ದುರ್ಲಭವೆಂದೇ ಹೇಳಬೇಕು.

ಇದಲ್ಲದೆ ಅನೇಕ ಭಗವದ್ಭಕ್ತರು ಶುದ್ಧವೈಷ್ಣವ ಪದ್ಧತಿಯಲ್ಲಿ ವ್ರತದ ಪುಸ್ತಕವನ್ನು ತಾವು ಯಾಕೇ ಬರೆಯಬಾರದು? ಎಂದು ಕೇಳಿದಾಗ ಆ ಗ್ರಂಥದ ಅವಶ್ಯಕತೆಯನ್ನು ಅರಿತು ಈ ಗ್ರಂಥವು ಹೊರಬರುವಂತಾಗಿದೆ.

ಈ ಗ್ರಂಥವನ್ನು ಬರೆಯುವಾಗ ವ್ರತಕಲ್ಪ, ವ್ರತರಾಜ, ವ್ರತಾನುಷ್ಠಾನ, ಮೊದಲಾದ ಗ್ರಂಥಗಳಿಂದ ವಿಷಯವನ್ನು ಸಂಗ್ರಹಿಸಿದ್ದೇನೆ.

ಇದರಿಂದ ಸಜ್ಜನರು ವೈಷ್ಣವ ಪದ್ಧತಿಯಿಂದ ಗಣಪತಿ ಮೊದಲಾದ ವಿಷ್ಣುಭಕ್ತರ ಪೂಜಾ ವ್ರತಾದಿಗಳನ್ನು ಆಚರಿಸಿದರೆ ಶ್ರೀಮದಾಚಾರ್ಯರ ಅನುಗ್ರಹದ ಮೂಲಕ ಶ್ರೀ ಭಗವಂತನ ಅನುಗ್ರಹವೂ ಲಭಿಸುವುದರಲ್ಲಿ ಸಂಶಯವಿಲ್ಲ.

ಈ ಗ್ರಂಥವನ್ನು ನನ್ನ ಪೂಜ್ಯ ಗುರುಗಳಾದ ಶ್ರೀ ಶ್ರೀ 108 ಶ್ರೀ ಪೇಜಾವರ ಮಠಾಧೀಶರಾದ ಪರ್ಯಾಯ ಪೀಠದಲ್ಲಿ ರಾರಾಜಿಸುತ್ತಿರುವ ಶ್ರೀ ವಿಶ್ವೇಶತೀರ್ಥ ಗುರುಗಳ ಪಾದಕಮಲಗಳಲ್ಲಿ ಭಕ್ತಿ ಪೂರ್ವಕವಾಗಿ ಅರ್ಪಿಸುವೆ.

ನಮ್ಮಿಂದ ಯಾವುದೇ ರೀತಿಯ ಒಳ್ಳೆ ಕಾರ್ಯವು ನಡೆದರೂ ಅದರ ಕೀರ್ತಿ ಪೂಜ್ಯ ಗುರುಗಳಿಗೆ ಸೇರಬೇಕು.

**ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ ತಸ್ಮೈ ಸುಭದ್ರಶ್ರವಸೇ ನಮೋ ನಮಃ।**

**ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ॥**

ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಶ್ರೀಕರ್ ಗ್ರಾಫಿಕ್ಸ್‌ನ ಶ್ರೀಮಾನ್ ವಿಠಲ್‌ರವರಿಗೂ, ಡಿ.ಟಿ.ಪಿ. ಕಾರ್ಯವನ್ನು ಆಸಕ್ತಿಯಿಂದ ಮಾಡಿದ ಶ್ರೀಮಾನ್ ಆನಂದ್‌ರವರಿಗೂ ಚತುರ್ವೇದಿ ಪ್ರಕಾಶನವು ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಈ ಗ್ರಂಥಕ್ಕೆ ಧನ ಸಹಾಯವನ್ನು ಮಾಡಿರುವ ಭಗವದ್ಭಕ್ತರಿಗೆಲ್ಲರಿಗೂ ಭಗವಂತನು ಆಯುರಾರೋಗ್ಯಾದಿಗಳನ್ನು ನೀಡಿ ಅನುಗ್ರಹಿಸಲೆಂದು ಭಗವಂತನಲ್ಲಿ ಪ್ರಾರ್ಥಿಸುವೆ.

**ಇತಿ ಸಜ್ಜನ ವಿಧೇಯ**
**ಯಸ್. ವೇದವ್ಯಾಸಾಚಾರ್ಯ**

## ಭಾಗ-1

# 1. ಶ್ರೀಸಿದ್ಧಿ ವಿನಾಯಕ ವ್ರತ (ಭಾದ್ರಪದ ಶುಕ್ಲ ಚತುರ್ಥಿ)

ಶ್ರೀ ಗುರುಭ್ಯೋ ನಮಃ। ಪರಮ ಗುರುಭ್ಯೋ ನಮಃ॥

ಓಂ ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಯೋನ್ನಿಯತಿಪ್ರದಾಯ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖಸತ್ಕಾರಣಾಯ
ವಿತತಾಯ ನಮೋ ನಮಸ್ತೇ॥

ಯೋ ವಿಪ್ರಲಂಭವಿಪರೀತಮತಿಪ್ರಭೂತ-ವಾದಾನ್ನಿರಸ್ಯ ಕೃತವಾನ್ ಭುವಿ ತತ್ವವಾದಂ। ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಂ ಆನಂದ ತೀರ್ಥ ಮುನಿವರ್ಯಮಹಂ ನಮಾಮಿ॥

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ। ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ॥

ಯತ್ರ ಯೋಗೀಶ್ವರಃ ಕೃಷ್ಣಃ ಯತ್ರ ಪಾರ್ಥೋ ಧನುರ್ಧರಃ।
ತತ್ರ ಶ್ರೀ ವಿಜಯೋ ಭೂತಿಃ ಧ್ರುವಾ ನೀತಿರ್ಮತಿರ್ಮಮ॥

ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾಮಮಂಗಲಂ।
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ॥

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ॥

ಅಯಂ ಮುಹೂರ್ತಃ ಸುಮುಹೂರ್ತೋಽಸ್ತು।

## ಘಂಟಾವಾದನಮ್

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ।
ಕುರು ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್॥

## ಭೂತೋಚ್ಚಾಟನಮ್

ಅಪಸರ್ಪಂತು ಯೇ ಭೂತಾಃ ಯೇ ಭೂತಾಃ ಭುವಿ ಸಂಸ್ಥಿತಾಃ।
ಯೇ ಭೂತಾಃ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ॥

ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ।
ತೇಷಾಮಪ್ಯವಿರೋಧೇನ ಪೂಜಾಕರ್ಮ ಸಮಾರಭೇ॥

## ಆಚಮನಮ್

ಆಚಮ್ಯ - ಓಂ ಕೇಶವಾಯ ಸ್ವಾಹಾ।
ಓಂ ನಾರಾಯಣಾಯ ಸ್ವಾಹಾ।
ಓಂ ಮಾಧವಾಯ ಸ್ವಾಹಾ।
ಓಂ ಗೋವಿಂದಾಯ ನಮಃ।
ಓಂ ವಿಷ್ಣವೇ ನಮಃ।
ಓಂ ಮಧುಸೂದನಾಯ ನಮಃ।
ಓಂ ತ್ರಿವಿಕ್ರಮಾಯ ನಮಃ।
ಓಂ ವಾಮನಾಯ ನಮಃ।
ಓಂ ಶ್ರೀಧರಾಯ ನಮಃ।
ಓಂ ಹೃಷೀಕೇಶಾಯ ನಮಃ।
ಓಂ ಪದ್ಮನಾಭಾಯ ನಮಃ।
ಓಂ ದಾಮೋದರಾಯ ನಮಃ।
ಓಂ ಸಂಕರ್ಷಣಾಯ ನಮಃ।
ಓಂ ವಾಸುದೇವಾಯ ನಮಃ।
ಓಂ ಪ್ರದ್ಯುಮ್ನಾಯ ನಮಃ।
ಓಂ ಅನಿರುದ್ಧಾಯ ನಮಃ।
ಓಂ ಪುರುಷೋತ್ತಮಾಯ ನಮಃ।
ಓಂ ಅಧೋಕ್ಷಜಾಯ ನಮಃ।
ಓಂ ನಾರಸಿಂಹಾಯ ನಮಃ।
ಓಂ ಅಚ್ಯುತಾಯ ನಮಃ।
ಓಂ ಜನಾರ್ದನಾಯ ನಮಃ।
ಓಂ ಉಪೇಂದ್ರಾಯ ನಮಃ।
ಓಂ ಹರಯೇ ನಮಃ।
ಓಂ ಶ್ರೀ ಕೃಷ್ಣಾಯ ನಮಃ।

## ಪ್ರಾಣಾಯಾಮ

ಓಂ ಪ್ರಣವಸ್ಯ - ಪರಬ್ರಹ್ಮಋಷಿಃ। ಪರಮಾತ್ಮಾ ದೇವತಾ। ದೈವೀಗಾಯತ್ರೀ ಛಂದಃ। ಪ್ರಾಣಾಯಾಮೇ ವಿನಿಯೋಗಃ।

ಓಂ ಭೂಃ। ಓಂ ಭುವಃ। ಓಂ ಸ್ವಃ। ಓಂ ಮಹಃ। ಓಂ ಜನಃ। ಓಂ ತಪಃ ಓಂ ಸತ್ಯಂ। ಓಂ ತತ್ಸವಿತುರ್ವರೇಣ್ಯಂ। ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್। ಓಮಾಪೋ ಜ್ಯೋತಿ ರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಮ್।

## ಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ। ಶ್ವೇತವರಾಹಕಲ್ಪೇ,। ವೈವಸ್ವತ ಮನ್ವಂತರೇ। ಕಲಿಯುಗೇ। ಪ್ರಥಮಪಾದೇ। ಜಂಬೂದ್ವೀಪೇ। ಭರತವರ್ಷೇ। ಭರತಖಂಡೇ। ಅಸ್ಮಿನ್ ದೇಶೇ ವರ್ತಮಾನೇ। ಚಾಂದ್ರಮಾನೇನ ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ-ಅಮುಕ ನಾಮಸಂವತ್ಸರೇ-ದಕ್ಷಿಣಾಯನೇ-ವರ್ಷಋತೌ-ಭಾದ್ರಪದಮಾಸೇ-ಶುಕ್ಲಪಕ್ಷೇ-ಚತುರ್ಥ್ಯಾಂ ಶುಭತಿಥೌ-ಅಮುಕವಾಸರ ಯುಕ್ತಾಯಾಂ-ಶುಭನಕ್ಷತ್ರ ಶುಭಯೋಗ-ಶುಭಕರಣ-ಏವಂಗುಣವಿಶಿಷ್ಟಾಯಾಂ-ಶುಭತಿಥೌ-ಅಸ್ಮಾಕಂ ಸಹ ಕುಟುಂಬಾನಾಂ ಕ್ಷೇಮ-ಸ್ಥೈರ್ಯ-ವಿಜಯ ವೀರ್ಯಾಯುರಾರೋಗ್ಯಾಭಿವೃದ್ಧ್ಯರ್ಥಂ, ಧರ್ಮಾರ್ಥಕಾಮಮೋಕ್ಷಾಖ್ಯ ಚತುರ್ವಿಧಪುರುಷಾರ್ಥಸಿದ್ಧ್ಯರ್ಥಂ, ಪುತ್ರಪೌತ್ರಾದ್ಯಭಿವೃದ್ಧ್ಯರ್ಥಂ ಇಷ್ಟಾರ್ಥಸಿದ್ಧ್ಯರ್ಥಂ, ಸಮಸ್ತದುರಿತೋಪಕ್ಷಯಾರ್ಥಂ-ಪರಮಾತ್ಮನಿ ಅಚಲಾಭಕ್ತಿ ಸಿದ್ಧ್ಯರ್ಥಂ, ಜ್ಞಾನಭಕ್ತಿವೈರಾಗ್ಯ ಸಿದ್ಧ್ಯರ್ಥಂ ಚ ಸಕಲ ವಿಘ್ನ ಪರಿಹಾರದ್ವಾರಾ ಭಗವದನುಗ್ರಹ ಸಿದ್ಧ್ಯರ್ಥಂ, ಸಿದ್ಧಿ ವಿನಾಯಕಾಂತರ್ಯಾಮಿ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಮಧ್ವಪತಿ ಶ್ರೀವಿಶ್ವಂಭರ ಪ್ರೇರಣಯಾ ಶ್ರೀವಿಶ್ವಂಭರಪ್ರೀತ್ಯರ್ಥಂ ಸಿದ್ಧಿವಿನಾಯಕಸ್ಯ ಧ್ಯಾನಾವಾಹನಾದಿ ಷೋಡಶೋಪಚಾರಪೂಜಾಂ ಕರಿಷ್ಯೇ।

## ಪೀಠಪೂಜಾ

ಪೀಠಮಧ್ಯೇ ಶ್ರೀ ಪರದೇವತಾಯೈ। ಶ್ರೀ ವಿಶ್ವಂಭರಾಯ ನಮಃ॥
ಆಧಾರರೂಪಶ್ಯೈ ಶಕ್ತ್ಯೈ ನಮಃ। ಶ್ರೀ ವಿಷ್ಣುಕೂರ್ಮಾಯ ನಮಃ।
ತತ್ಪುಚ್ಛಾಶ್ರಿತ ವಾಯುಕೂರ್ಮಾಯ ನಮಃ।

ವಾಯುಕೂರ್ಮಪುಚ್ಛಾಶ್ರಿತ ಅನಂತನಾಮಕ। ಶ್ರೀ ಶೇಷಾಯ ನಮಃ॥

ತತ್ಫಣಾಶ್ರಿತ ಪೃಥಿವ್ಯೈ ನಮಃ। ಕ್ಷೀರಸಾಗರಾಯ ನಮಃ॥

ರಮಾರೂಪಶ್ವೇತದ್ವೀಪಾಯ ನಮಃ।
ರಮಾರೂಪಾಯ ರತ್ನಮಂಟಪಾಯ ನಮಃ॥

ತನ್ಮಧ್ಯೇ ಸಿದ್ಧಿವಿನಾಯಕಾಂತರ್ಯಾಮಿ ಶ್ರೀವಿಶ್ವಂಭರರೂಪಿ ಪರಮಾತ್ಮನೇ ನಮಃ॥

ವಿಷ್ಣೋರಾಸನಭೂತಾಯ ದಿವ್ಯರತ್ನಮಯಾಯ ಚ।
ಪ್ರಧಾನಪುರುಷೇಶಾಯ ಮಹಾಪೀಠಾಯ ತೇ ನಮಃ॥ ✓

## ಧರ್ಮಾದಿಪೂಜಾ

ಧರ್ಮಾಯ ನಮಃ। ಜ್ಞಾನಾಯ ನಮಃ। ವೈರಾಗ್ಯಾಯ ನಮಃ। ಐಶ್ವರ್ಯಾಯ ನಮಃ। ಅಧರ್ಮಾಯ ನಮಃ। ಅಜ್ಞಾನಾಯ ನಮಃ। ಅವೈರಾಗ್ಯಾಯ ನಮಃ। ಅನೈಶ್ವರ್ಯಾಯ ನಮಃ। ಆನಂದಕಂದಾಯ ನಮಃ। ಬುದ್ಧಿನಾಲಾಯ ನಮಃ। ಅಹಂಕಾರ ಬೀಜಾಯ ನಮಃ। ಆಕಾಶಾತ್ಮನೇ ಕರ್ಣಿಕಾಯೈ ನಮಃ। ವಾಯ್ವಾತ್ಮನೇ ಕೇಸರಾಯ ನಮಃ। ಅಗ್ನ್ಯಾತ್ಮನೇ ದಲಾಯ ನಮಃ। ಪೃಥಿವ್ಯಾತ್ಮನೇ ಪರಿವೇಷಾಯ ನಮಃ, ಅಂ ಅರ್ಕಮಂಡಲಾಯ ನಮಃ। ಉಂ ಸೋಮಮಂಡಲಾಯ ನಮಃ, ವಂ ವಹ್ನಿಮಂಡಲಾಯ ನಮಃ।

ಸಂ ಸತ್ವಾಯ ನಮಃ। ರಂ ರಜಸೇ ನಮಃ। ತಂ ತಮಸೇ ನಮಃ। ವಿಂ ವಿದ್ಯಾಯೈ ನಮಃ। ಆತ್ಮನೇ ನಮಃ। ಅಂತರಾತ್ಮನೇ ನಮಃ। ಪರಮಾತ್ಮನೇ ನಮಃ। ಜ್ಞಾನಾತ್ಮನೇ ನಮಃ॥

## ಪ್ರಾಣಪ್ರತಿಷ್ಠಾಪನಂ

ಅಸ್ಯ ಶ್ರೀ ಪ್ರಾಣಪ್ರತಿಷ್ಠಾ ಮಂತ್ರಸ್ಯ ಬ್ರಹ್ಮಾ -ವಿಷ್ಣು - ಮಹೇಶ್ವರಾಃ ಋಷಯಃ। ಋಗ್ಯಜುಃ ಸಾಮಾಥರ್ವಾಣಿ ಛಂದಾಂಸಿ। ಕ್ರಿಯಾ ಮಯವಪುಃ ಪ್ರಾಣಾಖ್ಯಾ ದೇವತಾ। ಆಂ ಬೀಜಮ್। ಹ್ರೀಂ ಶಕ್ತಿ। ಕ್ರೌಂ ಕೀಲಕಂ। ಅಸ್ಯಾಂ ಮೃನ್ನಿರ್ಮಿತ ಗಣಪತಿ ಪ್ರತಿಮಾಯಾಂ ಪ್ರಾಣಪ್ರತಿಷ್ಠಾಪನೇ ವಿನಿಯೋಗಃ।

ಓಂ ಹ್ರಾಂ ಅಂಗುಷ್ಠಾಭ್ಯಾಂ ನಮಃ।
ಓಂ ಹ್ರೀಂ ತರ್ಜನೀಭ್ಯಾಂ ನಮಃ।
ಓಂ ಹ್ರೂಂ ಮಧ್ಯಮಾಭ್ಯಾಂ ನಮಃ।
ಓಂ ಹ್ರೈಂ ಅನಾಮಿಕಾಭ್ಯಾಂ ನಮಃ।
ಓಂ ಹ್ರೌಂ ಕನಿಷ್ಠಿಕಾಭ್ಯಾಂ ನಮಃ।
ಓಂ ಹ್ರಃ ಕರತಲ ಕರಪೃಷ್ಠಾಭ್ಯಾಂ ನಮಃ।
ಓಂ ಹ್ರಾಂ ಹೃದಯಾಯ ನಮಃ।
ಓಂ ಹ್ರೀಂ ಶಿರಸೇ ಸ್ವಾಹಾ।
ಓಂ ಹ್ರೂಂ ಶಿಖಾಯೈ ವಷಟ್।
ಓಂ ಹ್ರೈಂ ಕವಚಾಯ ಹುಂ
ಓಂ ಹ್ರೌಂ ನೇತ್ರಾಭ್ಯಾಂ ವೌಷಟ್।

ಓಂ ಹ್ರಃ ಅಸ್ತ್ರಾಯ ಫಟ್। ಭೂರ್ಭುವಸ್ಸುವರೋಂ ಇತಿ ದಿಗ್ಬಂಧಃ।

ಧ್ಯಾನಮ್ - ರಕ್ತಾಂಬೋಧಿಸ್ಥಪೋತೋಲ್ಲಸದರುಣಸರೋಜಾಧಿರೂಢಾ ಕರಾಬ್ಜೈಃ ಪಾಶಂ ಕೋದಂಡಮಿಕ್ಷೂದ್ಭವಮಲಿಗಣಮಪ್ಯಂಕುಶಂ ಪಂಚಬಾಣಾನ್।
ಬಿಭ್ರಾಣಾಸೃಕ್ಕಪಾಲಂ ತ್ರಿನಯನವಿಲಸತ್ ಪೀನವಕ್ಷೋರುಹಾಢ್ಯಾ ದೇವೀ ಬಾಲಾರ್ಕವರ್ಣಾ ಭವತು ಸುಖಕರೀ ಪ್ರಾಣಶಕ್ತಿಃ ಪರಾ ನಃ॥

ಓಂ ಆಂ ಹ್ರೀಂ ಕ್ರೋಂ ಯಂ ರಂ ಮ ಶಂ ಸಂ ಹಂ ಕ್ಷಂ ಹಂಸಸ್ಸೋಹಂ।
ಅಸ್ಯಾಂ ಮೂರ್ತೌ ಪ್ರಾಣಾಃ ತಿಷ್ಠಂತು॥
ಅಸ್ಯಾಂ ಮೂರ್ತೌ ಜೀವ ಇಹ ಸ್ಥಿತಃ।

ಅಸ್ಯಾಂ ಮೂರ್ತೌ ಸರ್ವೇಂದ್ರಿಯಾಣಿ ಶ್ರೋತ್ರ-ತ್ವಕ್-ಚಕ್ಷುರ್ಜಿಹ್ವಾ ಘ್ರಾಣ-ವಾಕ್-ಪಾಣಿ-ಪಾದ-ಪಾಯೂಪಸ್ಥಾನಿ ಇಹೈವ ಆಗತ್ಯ ಸುಖಂ ಚಿರಂ ತಿಷ್ಠಂತು ಸ್ವಾಹಾ।

ಓಂ ಅಸುನೀ ತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ ಭೋಗಮ್।

ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತಮನುಮತೇ ಮೃಳಯಾ ನಃ ಸ್ವಸ್ತಿ ಓಂ॥

ಓಂ ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಮ್।

ಪುನರ್ನಃ ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾಂ ೩ ಯಾ ಸ್ವಸ್ತಿಃ ಓಂ।

## ●ಗಣಪತಿಮಂತ್ರ ಜಪಃ

ಓಂ ಅಸ್ಯ ಶ್ರೀ ಗಣಪತಿ ಮಹಾಮಂತ್ರಸ್ಯ। ದೇವಭಾಗಋಷಿಃ। ಗಾಯತ್ರೀ ಛಂದಃ। ಮಹಾಗಣಪತ್ಯಂತರ್ಗತ ವಿಶ್ವಂಭರೋ ದೇವತಾ। ಮಹಾಗಣಪತಿಮಂತ್ರಜಪೇ ವಿನಿಯೋಗಃ।

ಓಂ ಕ್ಷಿಪ್ರ ಹೃದಯಾಯ ನಮಃ। ಓಂ ಪ್ರಸಾದಾಯ ಶಿರಸೇ ಸ್ವಾಹಾ। ಓಂ ನಮಃ ಶಿಖಾಯೈ ವಷಟ್। ಓಂ ಕ್ಷಿಪ್ರ ಕವಚಾಯ ಹುಂ। ಓಂ ಪ್ರಸಾದಾಯ ನೇತ್ರಾಭ್ಯಾಂ ವೌಷಟ್। ಓಂ ನಮಃ ಅಸ್ತ್ರಾಯ ಫಟ್। ಓಂ ಭೂರ್ಭುವಃ ಸ್ವರೋಮ್। ಇತಿ ದಿಗ್ಬಂಧಃ।

ರಕ್ತಾಂಬರೋ ರಕ್ತತನೂ ರಕ್ತಮಾಲ್ಯಾನುಲೇಪನಃ।
ಲಂಬೋದರೋ ಗಜಮುಖಃ ಪಾಶದಂತಾಂಕುಶಾಭಯೇ॥
ಬಿಭ್ರದ್ ಧ್ಯೇಯೋ ವಿಘ್ನಹರಃ ಕಾಮದಃ ತ್ವರಯಾ ಹ್ಯಯಮ್।

---

● ಕ್ಷಿಪ್ರಪ್ರಸಾದಾಯ ನಮಃ ಎಂಬ ಮಂತ್ರವನ್ನು ಯಥಾಶಕ್ತಿ ಜಪಿಸಿದರೆ ಸನ್ನಿಧಾನ ಹೆಚ್ಚುತ್ತದೆ.

ಓಂ ಕ್ಷಿಪ್ರಪ್ರಸಾದಾಯ ನಮಃ। (108, 1008 ಬಾರಿ)

ಪುನಃ ಧ್ಯಾನ, ಅಂಗನ್ಯಾಸ, ತರ್ಪಣ॥

ನಮೋಗಣಪತಯೇ ನಮಃ ಪ್ರಮಥಪತಯೇ ನಮಸ್ತೇಽಸ್ತು ಲಂಬೋದರಾಯೈಕದಂತಾಯ ವಿಘ್ನನಾಶಿನೇ ಶಿವಸುತಾಯ ಶ್ರೀವರದ ಮೂರ್ತಯೇ ಶ್ರೀಮನ್ಮಹಾಗಣಾಧಿಪತಯೇ ನಮಃ।

ಸಿಂಧೂರಾಭಂ ತ್ರಿನೇತ್ರಂ ಪೃಥುವರಜಠರಂ ಹಸ್ತಪದ್ಮೈರ್ದಧಾನಂ ದಂತಂ ಪಾಶಾಂಕುಶೇಷ್ಟಾನ್ಯುರುಕರವಿಲಸದ್ಬೀಜಪೂರಾಭಿರಾಮಮ್॥

ಬಾಲೇಂದುಜ್ಯೋತಿಮೌಲಿಂ ಕರಿಪತಿವದನಂ ದಾನಪೂರಾರ್ದ್ರಗಂಡಂ ಭೋಗೀಂದ್ರಾಬದ್ಧಭೂಷಂ ಭಜತ ಗಣಪತಿಂ ರಕ್ತವಸ್ತ್ರಾಂಗರಾಗಮ್॥

ಚತುರ್ಭುಜೈಃ ಗಜದಂತಾಕ್ಷಮಾಲಾಪರಶುಮೋದಕಧಾರಿಣೇ, ತಪ್ತಕಾಂಚನ ವರ್ಣಾಯ, ಶೂರ್ಪಕರ್ಣಾಯ ಗಜಾನನಾಯ, ಲಂಬೋದರಾಯ, ಸರ್ಪಯಜ್ಞೋಪವೀತಿನೇ, ವ್ಯಾಘ್ರಚರ್ಮಾಂಬರಧರಾಯ, ಸರ್ವಾಭರಣ ಭೂಷಿತಾಯ, ಮೂಷಕೋಪರಿಸಂಸ್ಥಿತಾಯ, ಓಂ ನಮೋ ಭಗವತೇ ಸಕಲಗುಣಾತ್ಮನೇ, ಸಕಲಶಕ್ತಿಯುತಾಯ, ಮಹಾಯೋಗ ಪೀಠಸ್ಥಾಯ ಸಿದ್ಧಿವಿನಾಯಕಾಂತರ್ಯಾಮಿ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ವಿಶ್ವಂಭರಾಯ ನಮಃ।

ಓಂ ಭೂಃ ಸಿದ್ಧಿವಿನಾಯಕಾಂತರ್ಯಾಮಿ ಶ್ರೀ ಭಾರತೀರಮಣಮುಖ್ಯ- ಶ್ರೀ ವಿಶ್ವಂಭರಂ ಆವಾಹಯಾಮಿ।

ಓಂ ಭುವಃ ಸಿದ್ಧಿವಿನಾಯಕಾಂತರ್ಯಾಮಿ ಶ್ರೀಭಾರತೀ-ಮು- ಪ್ರಾಣಾಂತರ್ಗತ ಶ್ರೀವಿಶ್ವಂಭರಂ ಆವಾಹಯಾಮಿ॥

ಓಂ ಸ್ವಃ ಸಿದ್ಧಿವಿನಾಯಕಾಂತರ್ಯಾಮಿ ಶ್ರೀ ಭಾ-ಮುಖ್ಯ ಪ್ರಾಣಾಂತರ್ಗತ ಶ್ರೀ ವಿಶ್ವಂಭರಂ ಆವಾಹಯಾಮಿ।

ಓಂ ಭೂರ್ಭುವಸ್ಸ್ವಃ ಸಿದ್ಧಿವಿನಾಯಕಾಂತರ್ಯಾಮಿ ಶ್ರೀಭಾ-ಮು- ಪ್ರಾಣಾಂತರ್ಗತ ಶ್ರೀ ವಿಶ್ವಂಭರಂ ಆವಾಹಯಾಮಿ - ಸ್ಥಾಪಯಾಮಿ - ಪೂಜಯಾಮಿ। ನಮಸ್ಕರೋಮಿ॥

ಓಂ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಂ।

ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ॥

ಓಂ ಏಕದಂತಾಯ ವಿದ್ಮಹೇ ವಕ್ರತುಂಡಾಯ ಧೀಮಹಿ। ತನ್ನೋ ದಂತಿಃ ಪ್ರಚೋದಯಾತ್।

ಓಂ ಓಂ ನಮೋ ನಾರಾಯಣಾಯ ಓಂ (ಎಂಟು ಬಾರಿ)

ಆವಾಹಿತೋ ಭವ। ಸ್ಥಾಪಿತೋ ಭವ। ಸನ್ನಿಹಿತೋ ಭವ। ಸನ್ನಿರುದ್ಧೋ ಭವ।ಅವಕುಂಠಿತೋ ಭವ। ಸುಪ್ರಸನ್ನೋ ಭವ। ವರದೋ ಭವ। ಪ್ರಸೀದ। ಪ್ರಸೀದ।

(ಆವಾಹನಾದಿ ಸಪ್ತಮುದ್ರಾಃ ಪ್ರದರ್ಶಯೇತ್)

ಓಂ ಕ್ಷಿಪ್ರಪ್ರಸಾದಾಯ ನಮಃ। ಏಹ್ಯೇಹಿ, ಶ್ರೀಗಣಪತ್ಯಂತರ್ಗತ ಶ್ರೀ ವಿಶ್ವಂಭರಂ ಪೀಠಸ್ಥಿತ ಏತದ್‌ಧಾತುಮಯಪ್ರತಿಮಾಂತಸ್ಥಿತ ತೇಜಸ್ಸಾರ ಮಯಭೂತ ಪ್ರತಿಮಾಂತಸ್ಥಿತ ಶ್ರೀ ಮುಖ್ಯಪ್ರಾಣ ಪ್ರತಿಮಾಮಧ್ಯೇ ರಮಯಾ ಸಹ ಕ್ಷೀರನೀರವದಾಸೀನಸ್ವಪ್ರತಿಮಾಯಾಂ ಆವಾಹಯಾಮಿ।
(ಪಾದ- ಹೃದಯ-ಮಸ್ತಕೇಷು ಅಷ್ಟಾಕ್ಷರಾದಿಮಂತ್ರೈಃ ಅಭಿಮೃಶ್ಯ)

ಓಮಿತಿ ಪ್ರಣವಂ ಪಂಚದಶವಾರಂ ಜಪಿತ್ವಾ। "ತಚ್ಚಕ್ಷುರ್ದೇಹಿತಂ" ಇತಿ ಮಂತ್ರೇಣ ದೇವಸ್ಯಾಜ್ಯೇನ ನೇತ್ರೋನ್ಮೀಲನಂ ಕುರ್ಯಾತ್॥

## ಧ್ಯಾನಮ್

ಏಕದಂತಂ ಶೂರ್ಪಕರ್ಣಂ ಗಜವಕ್ತ್ರಂ ಚತುರ್ಭುಜಂ।
ಪಾಶಾಂಕುಶಧರಂ ದೇವಂ ಧ್ಯಾಯೇತ್ ಸಿದ್ಧಿವಿನಾಯಕಂ॥

ಧ್ಯಾಯೇದ್ ದೇವಂ ಮಹಾಕಾಯಂ ತಪ್ತಕಾಂಚನಸನ್ನಿಭಂ।
ದಂತಾಕ್ಷಮಾಲಾಪರಶು ಪೂರ್ಣಮೋದಕಹಸ್ತಕಮ್॥

ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್।

ಸಭೂಮಿಂ ವಿಶ್ವತೋವೃತ್ವಾತ್ಯತಿಷ್ಠದ್ ದಶಾಂಗುಲಮ್॥

ಓಂ ಸಿದ್ಧಿವಿನಾಯಕಾಂತರ್ಯಾಮಿ ಶ್ರೀ ವಿಶ್ವಂಭರಾಯ।
ನಮಃ ಧ್ಯಾಯಾಮಿ। ಧ್ಯಾನಂ ಸಮರ್ಪಯಾಮಿ॥

## ಆವಾಹನಮ್

ಆವಾಹಯಾಮಿ ವಿಘ್ನೇಶ ಸುರರಾಜಾರ್ಚಿತೇಶ್ವರ।
ಅನಾಥನಾಥ ಸರ್ವಜ್ಞ ಪೂಜಾರ್ಥಂ ಗಣನಾಯಕ॥

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ।
ಉತಾಮೃತತ್ವಸ್ಯೇಶಾನೋ ಯದನ್ನೇ ನಾತಿರೋಹತಿ॥

ಓಂ ಸಿದ್ಧಿವಿನಾಯಕಾಂತರ್ಗತ ಶ್ರೀ ವಿಶ್ವಂಭರಾಯನಮಃ ಆವಾಹಯಾಮಿ।

## ಆಸನಮ್

ಅನೇಕರತ್ನ ಸಂಯುಕ್ತಂ ಮುಕ್ತಾಮಣಿವಿಭೂಷಿತಂ।
ಸ್ವರ್ಣ ಸಿಂಹಾಸನಂ ಚಾರು ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್॥

ಏತಾವಾನಸ್ಯ ಮಹಿಮಾತೋ ಜ್ಯಾಯಾಂಶ್ಚ ಪೂರುಷಃ।
ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ।

ಶ್ರೀ ಸಿದ್ಧಿವಿನಾಯಕಾಯ ನಮಃ ಆಸನಂ ಸಮರ್ಪಯಾಮಿ।

## ಅರ್ಘ್ಯಮ್

ಅರ್ಘ್ಯಂ ಚ ಫಲಸಂಯುಕ್ತಂ ಗಂಧ ಪುಷ್ಪಾಕ್ಷತೈಃ ಯುತಂ।
ಅರ್ಘ್ಯಂ ಗೃಹಾಣ ದೇವೇಶ ಸರ್ವಸಿದ್ಧಿಪ್ರದಾಯಕ॥

ತ್ರಿಪಾದೂರ್ಧ್ವ ಉದೈತ್ ಪುರುಷಃ ಪಾದೋಽಸ್ಯೇಹಾಭವತ್ ಪುನಃ।
ತತೋ ವಿಷ್ವಙ್ ವ್ಯಕ್ರಾಮತ್ ಸಾಶನಾನಶನೇ ಅಭಿ॥

ಶ್ರೀ ಸಿದ್ಧಿವಿನಾಯಕಾಯ ನಮಃ ಹಸ್ತಯೋಃ ಅರ್ಘ್ಯಂ ಸಮರ್ಪಯಾಮಿ।

## ಪಾದ್ಯಮ್

ಸರ್ವತೀರ್ಥ ಸಮುದ್ಭೂತಂ ಪಾದ್ಯಂ ಗಂಧಾದಿಸಂಯುತಂ।
ವಿಘ್ನರಾಜ ಗೃಹಾಣೇದಂ ಭಗವನ್ ಭಕ್ತವತ್ಸಲ॥

ತಸ್ಮಾದ್ ವಿರಾಳಜಾಯತ ವಿರಾಜೋ ಅಧಿ ಪುರುಷಃ।
ಸ ಜಾತೋಽತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ॥

ಶ್ರೀ ಸಿದ್ಧಿವಿನಾಯಕಾಂತರ್ಗತ ವಿಶ್ವಂಭರಾಯ ನಮಃ। ಇದಂ ತೇ ಪಾದ್ಯಂ, ಸುಪಾದ್ಯಂ, ಸುಪಾದ್ಯಮ್॥

## ♦ಮಧುಪರ್ಕಂ

ದಧ್ಯಾಜ್ಯಮಧುಸಂಯುಕ್ತಂ ಮಧುಪರ್ಕಂ ಮಯಾऽऽಹೃತಂ।
ಗೃಹಾಣ ಸರ್ವಲೋಕೇಶ ಗಣನಾಥ ನಮೋಸ್ತು ತೇ।
ಯತ್ಪುರುಷೇಣ ಹವಿಷಾ ದೇವಾ ಯಜ್ಞಮತ್ವತ॥
ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ।
ಶ್ರೀ ಸಿದ್ಧಿವಿನಾಯಕಾಯ ನಮಃ ಮಧುಪರ್ಕಂ ಸಮರ್ಪಯಾಮಿ॥

## ಆಚಮನಮ್

ವಿನಾಯಕ ನಮಸ್ತುಭ್ಯಂ ತ್ರಿದಶೈರಭಿವಂದಿತ।
ಗಂಗೋದಕೇನ ತೋಯೇನ ಶೀಘ್ರಮಾಚಮನಂ ಕುರು॥
ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ।
ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ॥
ಶ್ರೀ ಸಿದ್ಧಿವಿನಾಯಕಾಯನಮಃ ಆಚಮನಂ ಸಮರ್ಪಯಾಮಿ।

## ✦ಪಂಚಾಮೃತ ಸ್ನಾನಮ್

ಸ್ನಾನಂ ಪಂಚಾಮೃತಂ ದೇವ ಗೃಹಾಣ ಗಣನಾಯಕ।
ಅನಾಥನಾಥ ಸರ್ವಜ್ಞ ಗೀರ್ವಾಣಪರಿಪೂಜಿತ॥
ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂ ಪೃಷದಾಜ್ಯಮ್।
ಪಶೂಂಸ್ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚ ಯೇ॥
ಶ್ರೀ ಸಿದ್ಧಿವಿನಾಯಕಾಯ ನಮಃ ಪಂಚಾಮೃತೇನ ಸ್ನಪಯಿಷ್ಯೇ।

---

♦ಮಧುಪರ್ಕವೆಂದರೆ ಮೊಸರು, ಜೇನು, ತುಪ್ಪಗಳ ಮಿಶ್ರಣವು ಇದನ್ನು ಮಿಶ್ರೀಕರಿಸಿ ದೇವರಿಗೆ ಸಮರ್ಪಿಸಬೇಕು. ಊರಿಂದ ಬಂದ ಅತಿಥಿಗಳಿಗೆ ತಿಂಡಿಯ ವ್ಯವಸ್ಥೆಯಂತೆ ಮಧುಪರ್ಕವು.

✦ಪಂಚಾಮೃತಾಭಿಷೇಕವನ್ನು ಮಾಡುವಾಗ ಸಾಲಿಗ್ರಾಮ ಹಾಗೂ ಕೃಷ್ಣಪ್ರತಿಮೆಯನ್ನು ಇಟ್ಟುಕೊಂಡು ಮೊದಲು ಆಪ್ಯಾಯಸ್ವೇತ್ಯಾದಿ ಮಂತ್ರಗಳಿಂದ ಭಗವಂತನಿಗೆ ಅಭಿಷೇಕಿಸಿ ನಂತರ ತಾರತಮ್ಯಾನುಸಾರೇಣ ವಾಯು, ಗರುಡ, ಶೇಷಾದಿಗಳಿಗೆ ಅಭಿಷೇಕಿಸಿ ನಂತರ ಗಣಪತಿಯ ಬೆಳ್ಳಿಯ ಪ್ರತಿಮೆಗೆ ಅಭಿಷೇಕಿಸಿ ಹೂವಿನಿಂದ ಮಣ್ಣಿನ ಗಣಪತಿ ಪ್ರತಿಮೆಗೆ ಪ್ರೋಕ್ಷಿಸಬೇಕು.

## ಪಯಃ ಸ್ನಾನಮ್

ಕಾಮಧೇನು ಸಮುದ್ಭೂತಂ ಪರಮಂ ಪಾವನಂ ಪಯಃ।
ತೇನ ಸ್ನಾನಂ ಕುರುಷ್ವ ತ್ವಂ ಹೇರಂಬ ಗಣನಾಯಕ॥

ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ।
ಭವಾ ವಾಜಸ್ಯ ಸಂಗಥೇ। ಕ್ಷೀರೇಣ ಸ್ನಪಯಾಮಿ॥

## ದಧಿಸ್ನಾನಮ್

ಚಂದ್ರಮಂಡಲಸಂಕಾಶಂ ಸರ್ವದೇವಪ್ರಿಯಂ ದಧಿ।
ಸ್ನಾನಾರ್ಥಂ ತೇ ಪ್ರಯಚ್ಛಾಮಿ ಗೃಹಾಣ ಗಣನಾಯಕ॥

ದಧಿಕ್ರಾವ್ಣ್ಣೋಽಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ।
ಸುರಭಿನೋ ಮುಖಾ ಕರತ್ ಪ್ರಣ ಆಯೂಂಷಿ ತಾರಿಷತ್।
ದಧ್ನಾ ಸ್ನಪಯಾಮಿ॥

## ಘೃತಸ್ನಾನಮ್

ಘೃತಂ ಮಿಮಿಕ್ಷೇ ಘೃತಮಸ್ಯ ಯೋನಿರ್ಘೃತೇ ಶ್ರಿತೋಘೃತಂ ವಸ್ಯ
ಧಾಮ। ಅನುಷ್ವಧಮಾ ವಹ ಮಾದಯಸ್ವ ಸ್ವಾಹಾಕೃತಂ ವೃಷಭ ವಕ್ಷಿ
ಹವ್ಯಮ್। ಶ್ರೀ ಸಿದ್ಧಿವಿನಾಯಕಾಯ ನಮಃ ಘೃತೇನ ಸ್ನಪಯಾಮಿ।

## ಮಧುಸ್ನಾನಮ್

ಸರ್ವೌಷಧಿಸಮುದ್ಭೂತಂ ಪೀಯೂಷಮಧುರಂ ಮಧು।
ಸ್ನಾನಾರ್ಥಂ ತೇ ಪ್ರಯಚ್ಛಾಮಿ ಗೃಹಾಣ ಗಿರಿಜಾಸುತ॥
ಓಂ ಮಧುವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ।
ಮಾಧ್ವೀರ್ನಸ್ಸಂತ್ವೋಷಧೀಃ।
ಓಂ ಸಿದ್ಧಿವಿನಾಯಕಾಯ ನಮಃ। ಮಧುನಾ ಸ್ನಪಯಾಮಿ॥

## ಶರ್ಕರಾಸ್ನಾನಮ್

ಇಕ್ಷುದಂಡ ಸಮುದ್ಭೂತದಿವ್ಯಶರ್ಕರಯಾ ಹ್ಯಹಮ್।
ಸ್ನಾಪಯಾಮಿ ಮಹಾಭಕ್ತ್ಯಾ ಪ್ರೀತೋ ಭವ ಶಿವಾತ್ಮಜ॥

ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತು
ನಾಮ್ನೇ। ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ
ಮಧು ಮಾ ಅದಾಭ್ಯಃ।

ಶ್ರೀ ಸಿದ್ಧಿವಿನಾಯಕಾಯನಮಃ ಶರ್ಕರಾಸ್ನಾನಂ ಸಮರ್ಪಯಾಮಿ॥

## ಗಂಧೋದಕ ಸ್ನಾನಮ್

ಕರ್ಪೂರೈಲಾಸಮಾಯುಕ್ತಂ ಸುಗಂಧದ್ರವ್ಯಸಂಯುತಂ।
ಗಂಧೋದಕಂ ಗಣಾಧ್ಯಕ್ಷ ಸ್ನಾನಾರ್ಥಂ ಪ್ರತಿಗೃಹ್ಯತಾಂ॥

## ಶುದ್ಧೋದಕಸ್ನಾನಮ್

ಗಂಗಾದಿ ಸರ್ವತೀರ್ಥೇಭ್ಯಃ ಆಹೃತೈರಮಲೈರ್ಜಲೈಃ।
ಸ್ನಾನಂ ಕುರುಷ್ವ ಭಗವಾನ್ ಉಮಾಪುತ್ರ ನಮೋಽಸ್ತು ತೇ॥

ತಸ್ಮಾದ್ಯಜ್ಞಾತ್ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ।
ಛಂದಾಂಸಿ ಜಜ್ಞಿರೇ ತಸ್ಮಾತ್ ಯಜುಃ ತಸ್ಮಾದಜಾಯತ॥

ಶ್ರೀ ಸಿದ್ಧಿವಿನಾಯಕಾಯ ನಮಃ ಶುದ್ಧೋದಕೇನ ಅಭಿಷಿಂಚಾಮಿ।

## *ವಸ್ತ್ರಯುಗ್ಮ

ನವವಸ್ತ್ರದ್ವಯಂ ರಕ್ತಂ ದೇವಾನಾಂ ಸದೃಶಪ್ರಭಂ।
ಭಕ್ತ್ಯಾ ದತ್ತಂ ಗೃಹಾಣೇದಂ ಲಂಬೋದರ ನಮೋಽಸ್ತು ತೇ॥
ತಸ್ಮಾದಶ್ವಾ ಅಜಾಯಂತ ಯೇ ಕೇಚೋಭಯಾದತಃ।
ಗಾವೋ ಹ ಜಜ್ಞಿರೇ ತಸ್ಮಾತ್ ತಸ್ಮಾಜ್ಜಾತಾ ಅಜಾವಯಃ।
ಶ್ರೀಸಿದ್ಧಿ ವಿನಾಯಕಾಯನಮಃ। ರಕ್ತವಸ್ತ್ರದ್ವಯಂ ಸಮರ್ಪಯಾಮಿ॥

---

*ಗಣಪತಿಯ ವಸ್ತ್ರವು ಕೆಂಪಾದ್ದರಿಂದ ಗಣಪತಿಗೆ ಕುಂಕುಮದಿಂದ ಕೆಂಪಾಗಿಸಿದ ವಸ್ತ್ರದ್ವಯವನ್ನೇ ಅರ್ಪಿಸಬೇಕು. ಆದ್ದರಿಂದಲೇ ರಕ್ತಾಂಬರಧಾರಿ ಎನಿಸಿರುವನು. ಮಠದ ಸಂಪ್ರದಾಯವು ಅನ್ವಯವಾಗುವುದಿಲ್ಲ.

---

## ಯಜ್ಞೋಪವೀತಮ್

ರಾಜಿತಂ ಬ್ರಹ್ಮಸೂತ್ರಂ ಚ ಕಾಂಚನಂ ಸೋತ್ತರೀಯಕಂ।
ಗೃಹಾಣ ಚಾರು ಸರ್ವಜ್ಞ ಭಕ್ತಾನಾಮಿಷ್ಟದಾಯಕ॥

ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇಃ ಯಸ್ಸಹಜಂ ಪುರಸ್ತಾತ್।
ಆಯುಷ್ಯಮಗ್ರ್ಯಂ। ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು
ತೇಜಃ। ಸಿದ್ಧಿವಿನಾಯಕಾಯನಮಃ ಯಜ್ಞೋಪವೀತಂ ಸಮರ್ಪಯಾಮಿ॥

## ❒ಗಂಧಮ್

ಗಂಧಕರ್ಪೂರಸಂಯುಕ್ತಂ ದಿವ್ಯಚಂದನಮುತ್ತಮಂ।
ವಿಲೇಪನಂ ಸುರಶ್ರೇಷ್ಠ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್॥

## ⌑ ಆಭರಣಮ್

ಕುಂಡಲಾಂಗದ ಕೇಯೂರ ಮುಕ್ತಾಹಾರಾಂಗದಾನಿ ಚ।
ಭೂಷಣಾನಿ ಗೃಹಾಣೇಶ ಪಾರ್ವತೀಪ್ರಿಯ ನಂದನ॥
ನಾನಾವಿಧ ಆಭರಣಾನಿ ಸಮರ್ಪಯಾಮಿ।

## ಆಯುಧಾನಿ

ಆಯುಧಾನಿ ಚ ತೀಕ್ಷ್ಣಾಣಿ ದೈತ್ಯಸಂಘಾತಕಾನಿ ಚ।
ಮಮ ವಿಘ್ನವಿನಾಶಾಯ ಧಾರಯ ಶ್ರೀಗಜಾನನ॥

ಅಂಕುಶಂ ಪರಶುಂ ಪಾಶಂ ದಂತಂ ಧಾರಯ ಬಾಹುಭಿಃ।
ಅಭೀಷ್ಟಂ ಕುರು ಮೇ ದೇವ ಸರ್ವಶತ್ರೂನ್ ವಿಮರ್ದಯ॥
ಆಯುಧಾನಿ ಸಮರ್ಪಯಾಮಿ।

## ಅಂಗಪೂಜಾ

ಗಣೇಶಾಯ ನಮಃ ಪಾದೌ ಪೂಜಯಾಮಿ।
ಏಕದಂತಾಯ ನಮಃ ಗುಲ್ಫೌ ಪೂಜಯಾಮಿ।
ಶೂರ್ಪಕರ್ಣಾಯ ನಮಃ ಜಾನುನೀ ಪೂಜಯಾಮಿ।

---

❒ ಗಂಧವನ್ನು ಗಣಪತಿಗೆ ಅರ್ಪಿಸುವಾಗ ಭಗವಂತನಿಗೆ ಅರ್ಪಿಸಿದ ಗಂಧವನ್ನು ಅರ್ಪಿಸಬೇಕು.
⌑ ನಾವು ಧರಿಸಿರುವ ಆಭರಣಗಳನ್ನು ದೇವರಿಗೆ ಅರ್ಪಿಸುವಾಗ ಮೊದಲು ನೀರಿನಿಂದ ತೊಳೆದು ನಂತರ ಅರ್ಪಿಸಬೇಕು.

ವಿಘ್ನರಾಜಾಯ ನಮಃ ಜಂಘೇ ಪೂಜಯಾಮಿ।
ಆಖುವಾಹನಾಯ ನಮಃ ಊರೂ ಪೂಜಯಾಮಿ।
ಹೇರಂಬಾಯ ನಮಃ ಕಟಿಂ ಪೂಜಯಾಮಿ।
ಕಾಮಾರಿಸೂನವೇ ನಮಃ ನಾಭಿಂ ಪೂಜಯಾಮಿ।
ಲಂಬೋದರಾಯ ನಮಃ ಉದರಂ ಪೂಜಯಾಮಿ।
ಗೌರೀತನಯಾಯ ನಮಃ ಸ್ತನೌ ಪೂಜಯಾಮಿ।
ಗಣನಾಯಕಾಯ ನಮಃ ಹೃದಯಂ ಪೂಜಯಾಮಿ।
ಸ್ಥೂಲಕಂಠಾಯ ನಮಃ ಕಂಠಂ ಪೂಜಯಾಮಿ।
ಸ್ಕಂದಾಗ್ರಜಾಯ ನಮಃ ಸ್ಕಂಧೌ ಪೂಜಯಾಮಿ।
ಪಾಶಹಸ್ತಾಯ ನಮಃ ಹಸ್ತಾನ್ ಪೂಜಯಾಮಿ।
ಗಜವಕ್ತ್ರಾಯ ನಮಃ ವಕ್ತ್ರಂ ಪೂಜಯಾಮಿ।
ಏಕದಂತಾಯ ನಮಃ ದಂತಾನ್ ಪೂಜಯಾಮಿ।
ವಿಘ್ನಹರ್ತ್ರೇ ನಮಃ ನೇತ್ರೇ ಪೂಜಯಾಮಿ।
ಶೂರ್ಪಕರ್ಣಾಯ ನಮಃ ಕರ್ಣೌ ಪೂಜಯಾಮಿ।
ಸ್ಥೂಲನಾಸಿಕಾಯ ನಮಃ ನಾಸಿಕಾಂ ಪೂಜಯಾಮಿ।
ಫಾಲಚಂದ್ರಾಯ ನಮಃ ಲಲಾಟಂ ಪೂಜಯಾಮಿ।
ಸರ್ವೇಶ್ವರಾಯ ನಮಃ ಶಿರಃ ಪೂಜಯಾಮಿ।
ಶ್ರೀ ಸಿದ್ಧಿವಿನಾಯಕಾಯ ನಮಃ ಸರ್ವಾಣ್ಯಂಗಾನಿ ಪೂಜಯಾಮಿ।

## ದ್ವಾದಶನಾಮ ಪೂಜಾ

ಸುಮುಖಾಯ ನಮಃ। ಏಕದಂತಾಯ ನಮಃ।
ಕಪಿಲಾಯ ನಮಃ। ಗಜಕರ್ಣಕಾಯ ನಮಃ।
ಲಂಬೋದರಾಯ ನಮಃ। ವಿಕಟಾಯ ನಮಃ।
ವಿಘ್ನರಾಜಾಯ ನಮಃ। ಗಣಾಧಿಪಾಯ ನಮಃ।
ಧೂಮಕೇತವೇ ನಮಃ। ಗಣಾಧ್ಯಕ್ಷಾಯ ನಮಃ।
ಫಾಲಚಂದ್ರಾಯ ನಮಃ। ಗಜಾನನಾಯ ನಮಃ।
ದ್ವಾದಶನಾಮಪೂಜಾಂ ಸಮರ್ಪಯಾಮಿ।

## ಅಥ ಪತ್ರಪೂಜಾ

ಸುಮುಖಾಯ ನಮಃ - ಮಾಲತೀಪತ್ರಂ ಸಮರ್ಪಯಾಮಿ (ಮಲ್ಲಿಗೆ
ಗಣೇಶಾಯ ನಮಃ - ಭೃಂಗರಾಜಪತ್ರಂ ಸಮರ್ಪಯಾಮಿ (ಭೃಂಗರಾಜ)
ಉಮಾಪುತ್ರಾಯ ನಮಃ - ಬಿಲ್ವಪತ್ರಂ ಸಮರ್ಪಯಾಮಿ
ಗಜಾನನಾಯ ನಮಃ - ದೂರ್ವಾಂ ಸಮರ್ಪಯಾಮಿ (ಗರಿಕೆ)
ಲಂಬೋದರಾಯ ನಮಃ - ಬದರೀಪುತ್ರಂ ಸಮರ್ಪಯಾಮಿ (ಬೋರೆ)
ಹರಸೂನವೇ ನಮಃ - ಧತ್ತೂರಪತ್ರಂ ಸಮರ್ಪಯಾಮಿ (ಉಮ್ಮತ್ತಿ)
ಗಜಕರ್ಣಾಯ ನಮಃ - ತುಲಸೀಪತ್ರಂ ಸಮರ್ಪಯಾಮಿ (ತುಲಸೀ)

ವಕ್ರತುಂಡಾಯ ನಮಃ - ಶಮೀಪತ್ರಂ ಸಮರ್ಪಯಾಮಿ✡
ಗುಹಾಗ್ರಜಾಯ ನಮಃ - ಅಪಾಮಾರ್ಗಪತ್ರಂ ಸಮರ್ಪಯಾಮಿ।

ಏಕದಂತಾಯ ನಮಃ - ಬೃಹತೀಪತ್ರಂ ಸಂ। (ನೆಲಗುಳ್ಳ)
ವಿಕಟಾಯ ನಮಃ - ಕರವೀರಪತ್ರಂ- ಸಂ। (ಕಣಗಿಲೆ)
ಕಪಿಲಾಯ ನಮಃ - ಅರ್ಕಪತ್ರಂ ಸಂ। (ಎಕ್ಕದೆಲೆ)
ಗಜದಂತಾಯ ನಮಃ - ಅರ್ಜುನಪತ್ರಂ ಸಂ। (ಧೂಪಪತ್ರ)
ವಿಘ್ನರಾಜಾಯ ನಮಃ - ವಿಷ್ಣುಕ್ರಾಂತಿಪತ್ರಂ ಸಂ। (ವಿಷ್ಣುಕ್ರಾಂತಿ)
ವಟವೇ ನಮಃ- ದಾಡಿಮೀಪತ್ರಂ ಸಂ। (ದಾಳಿಂಬೆ)
ಸುರಾಗ್ರಜಾಯ ನಮಃ - ದೇವದಾರುಪತ್ರಂ ಸಂ (ಸುರಹೊನ್ನೆ)
ಫಾಲಚಂದ್ರಾಯ ನಮಃ - ಮರುವಕಪತ್ರಂ ಸಂ (ಮರುಗ)
ಹೇರಂಬಾಯ ನಮಃ - ಅಶ್ವತ್ಥಪತ್ರಂ ಸಂ। (ಅಶ್ವತ್ಥ)
ಚತುರ್ಭುಜಾಯ ನಮಃ - ಜಾತೀಪತ್ರಂ ಸಂ। (ಜಾಜಿ)
ವಿನಾಯಕಾಯ ನಮಃ - ಕೇತಕೀಪತ್ರಂ ಸಂ। (ಕೇತಕಿ)

ಸರ್ವೇಶ್ವರಾಯ ನಮಃ - ಅಗಸ್ತಿಪತ್ರಂ ಸಂ। ಶ್ರೀಸಿದ್ಧಿವಿನಾಯಕಾಂತರ್ಯಾಮಿ
ಶ್ರೀ ವಿಶ್ವಂಭರಾಯ ನಮಃ। ಸರ್ವಾಣಿ ಪತ್ರಾಣಿ ಸಮರ್ಪಯಾಮಿ।

---

✡ತುಲಸಿಯು ಗಣಪತಿಗೆ "ನ ತುಲಸ್ಯಾ ವಿನಾಯಕಂ" ಎಂಬಂತೆ ನಿಷಿದ್ಧವಾದರೂ ಆ ನಿಷೇಧ ಭಾದ್ರಪದ ಚತುರ್ಥಿಯನ್ನು ಬಿಟ್ಟು ಇತರ ಗಣಪತಿ ಪೂಜೆಯಲ್ಲಿ ಎಂದು ತಿಳಿಯಬೇಕು. ತುಲಸ್ಯಾದಿ ಪತ್ರಗಳನ್ನು ಅರ್ಪಿಸುವಾಗ ಮೊದಲು ಸಾಲಿಗ್ರಾಮಕ್ಕೆ ಮುಟ್ಟಿಸಿ ನಂತರ ಅರ್ಪಿಸಬೇಕು.

## ಅಥ ಪುಷ್ಪಪೂಜಾ

ಗಜಾನನ ಗಣಾಧ್ಯಕ್ಷ ಸರ್ವಪಾಪಪ್ರಣಾಶನ।
ಪುಷ್ಪಾಣ್ಯಹಂ ಪ್ರದಾಸ್ಯಾಮಿ ಗೃಹಾಣ ತ್ವಂ ಗುಹಾಗ್ರಜ॥

ಸುಮುಖಾಯನಮಃ - ಶತಪತ್ರಪುಷ್ಪಂ ಸಮರ್ಪಯಾಮಿ।
ಗಣಾಧಿಪಾಯ ನಮಃ - ಪದ್ಮ ಪುಷ್ಪಂ ಸಮರ್ಪಯಾಮಿ।
ಉಮಾಪುತ್ರಾಯ ನಮಃ - ಕುಮುದ ಪುಷ್ಪಂ ಸಮರ್ಪಯಾಮಿ।
ಗಜಾನನಾಯ ನಮಃ - ○ನಂದ್ಯಾವರ್ತಪುಷ್ಪಂ ಸಮರ್ಪಯಾಮಿ।
ಲಂಬೋದರಾಯ ನಮಃ - ಛಂಪಕ ಪುಷ್ಪಂ ಸಮರ್ಪಯಾಮಿ।
ಹರಸೂನವೇ ನಮಃ - ಬಕುಲಪುಷ್ಪಂ ಸಮರ್ಪಯಾಮಿ।
ಗಜಕರ್ಣಾಯ ನಮಃ - ಮಲ್ಲಿಕಾಪುಷ್ಪಂ ಸಮರ್ಪಯಾಮಿ।
ಗುಹಾಗ್ರಜಾಯ ನಮಃ - ಕರ್ಣಿಕಾರ ಪುಷ್ಪಂ। ಸಮರ್ಪಯಾಮಿ।
ವಿಕಟಾಯ ನಮಃ - ಜಾತೀಪುಷ್ಪಂ ಸಮರ್ಪಯಾಮಿ।
ಇಭಾನನಾಯ ನಮಃ - ಭೃಂಗರಾಜ ಸಮರ್ಪಯಾಮಿ।
ವಿನಾಯಕಾಯ ನಮಃ - ಜಪಾಪುಷ್ಪಂ ಸಮರ್ಪಯಾಮಿ।
ಕಪಿಲಾಯ ನಮಃ - ಶೇವಂತಿಕಾ ಪುಷ್ಪಂ। ಸಮರ್ಪಯಾಮಿ।
ಭಿನ್ನದಂತಾಯ ನಮಃ - ದತ್ತೂರ ಪುಷ್ಪಂ ಸಮರ್ಪಯಾಮಿ।
ವಟವೇ ನಮಃ - ಪಾಟಲೀ ಪುಷ್ಪಂ ಸಮರ್ಪಯಾಮಿ।
ಗೌರೀತನಯಾಯ ನಮಃ - ಪುನ್ನಾಗ ಪುಷ್ಪಂ ಸಮರ್ಪಯಾಮಿ।
ಹೇರಂಬಾಯ ನಮಃ - ದ್ರೋಣ ಪುಷ್ಪಂ ಸಮರ್ಪಯಾಮಿ।
ಮೂಷಕವಾಹನಾಯ ನಮಃ - ಅಶೋಕ ಪುಷ್ಪಂ ಸಮರ್ಪಯಾಮಿ।
ಭಾಲಚಂದ್ರಾಯ ನಮಃ - ವಿಷ್ಣುಕ್ರಾಂತಿ ಪುಷ್ಪಂ ಸಮರ್ಪಯಾಮಿ।
ಸರ್ವಸಿದ್ಧಿ ಪ್ರದಾಯಿನೇ ನಮಃ - ಮುನಿಪುಷ್ಪಂ ಸಮರ್ಪಯಾಮಿ।
ಶ್ರೀ ಸಿದ್ಧಿವಿನಾಯಕಾಂತರ್ಗತ ಶ್ರೀ ವಿಶ್ವಂಭರಾಯ ನಮಃ। ನಾನಾವಿಧ ಪರಿಮಳ ಪುಷ್ಪಾಣಿ ಸಮರ್ಪಯಾಮಿ।

---

○ನಂದ್ಯಾವರ್ತ - ನಂದಿಬಟ್ಟಲು, ಚಂಪಕ = ಸಂಪಿಗೆ, ಬಕುಲ=ನಾಗಕೇಸರ, ಕರ್ಣಿಕಾರ = ಬೆಟ್ಟದಾವರೆ, ಜಾತೀ - ಜಾಜೀ - ಭೃಂಗರಾಜ = ಗರುಗ, ಕರವೀರ = ಕಣಗಲೆ. ಜಪಾಪುಷ್ಪ-ಕೆಂಪುದಾಸವಾಳ, ಧತ್ತೂರ- ಉಮ್ಮತ್ತಿ, ಪಾಟಲೀ = ಪಾದರಿಹೂವು, ದ್ರೋಣ=ತುಂಬೆ

## ಏಕವಿಂಶತಿ ನಾಮಪೂಜಾ

ಓಂ ಗಣೇಶಾಯ ನಮಃ। ಓಂ ವಿಘ್ನರಾಜಾಯ ನಮಃ।
ಓಂ ಸ್ಥೂಲಕಂಠಾಯ। ಸ್ಕಂದಾಗ್ರಜಾಯ ನಮಃ।
ಓಂ ಪರಶುಹಸ್ತಾಯ। ಗಜವಕ್ತ್ರಾಯ।
ಓಂ ಶೂರ್ಪಕರ್ಣಾಯ। ಉಮಾಪುತ್ರಾಯ ನಮಃ।
ಓಂ ಲಂಬೋದರಾಯ। ಏಕದಂತಾಯ ನಮಃ।
ಓಂ ವಿಕಟಾಯ ನಮಃ। ವಿನಾಯಕಾಯ ನಮಃ।
ಓಂ ವಟವೇ ನಮಃ। ಭಾಲಚಂದ್ರಾಯ ನಮಃ।
ಓಂ ಹೇರಂಬಾಯ ನಮಃ। ಸುರಾಗ್ರಗಣ್ಯಾಯ ನಮಃ।
ಓಂ ಕಪಿಲಾಯ ನಮಃ। ಗಜಕರ್ಣಾಯ ನಮಃ।
ಓಂ ಭಗ್ನದಂತಾಯ ನಮಃ। ಶ್ರೀ ಸಿದ್ಧಿವಿನಾಯಕಾಂತರ್ಯಾಮಿ
ಶ್ರೀ ವಿಶ್ವಂಭರಾಯ ನಮಃ। ನಾಮಪೂಜಾಂ ಸಮರ್ಪಯಾಮಿ।

## ಶ್ರೀ ಗಣಪತ್ಯಷ್ಟೋತ್ತರ ಶತನಾಮಾವಲಿಃ

ಓಂ ಶ್ರೀ ಗಣೇಶಾಯ ನಮಃ। ಓಂ ವಿಘ್ನರಾಜಾಯ ನಮಃ।
ಓಂ ಗೌರೀಪುತ್ರಾಯ ನಮಃ। ಓಂ ಗಣೇಶಾಯ ನಮಃ।
ಓಂ ಸ್ಕಂದಾಗ್ರಜಾಯ ನಮಃ। ಓಂ ಅವ್ಯಯಾಯ ನಮಃ।
ಓಂ ಪೂತಾಯ ನಮಃ। ಓಂ ದಕ್ಷಾಧ್ಯಕ್ಷಾಯ ನಮಃ।
ಓಂ ದ್ವಿಜಪ್ರಿಯಾಯ ನಮಃ। ಓಂ ಅಗ್ನಿಗರ್ವಚ್ಛಿದೇ ನಮಃ। 10

ಓಂ ಇಂದ್ರಶ್ರೀಪ್ರದಾಯ ನಮಃ। ಓಂ ವಾಣೀ ಬಲಪ್ರದಾಯ ನಮಃ।
ಓಂ ಸರ್ವಸಿದ್ಧಿ ಪ್ರದಾಯಕಾಯ ನಮಃ। ಓಂ ಶರ್ವಪುತ್ರಾಯ ನಮಃ।
ಓಂ ಶಿವಪ್ರಿಯಾಯ ನಮಃ। ಓಂ ಆಕಾಶಾಭಿಮಾನಿನೇ ನಮಃ।
ಓಂ ಕ್ಷಿಪ್ರಪ್ರಸಾದಾಯ ನಮಃ। ಓಂ ದೇವಾನೀಕಾರ್ಚಿತಾಯ ನಮಃ।
ಓಂ ಮಂಗಳಸ್ವರೂಪಾಯ ನಮಃ। ಓಂ ಶುದ್ಧಾಯ ನಮಃ। 20

ಓಂ ಬುದ್ಧಿದಾತ್ರೇ ನಮಃ। ಓಂ ಶಾಂತಾಯ ನಮಃ। ಓಂ ಅಖಂಡ ಬ್ರಹ್ಮಚಾರಿಣೇ ನಮಃ। ಓಂ ಗಜಮುಖಾಯ ನಮಃ। ಓಂ ದ್ವೈಮಾತುರಾಯ ನಮಃ । ಓಂ ಮುನಿಪೂಜಿತಾಯ ನಮಃ।

ಓಂ ದುಷ್ಟಾನಾಂ ವಿಘ್ನಕರ್ತ್ರೇ ನಮಃ। ಓಂ ಸುಜನ ವಿಘ್ನಾಪಹರ್ತ್ರೇ ನಮಃ।

ಓಂ ರಕ್ತಾಂಬರಾಯ ನಮಃ। ಓಂ ರಕ್ತಮಾಲ್ಯಾನುಲೇಪಿನೇ ನಮಃ। 30

ಓಂ ಏಕದಂತಾಯ ನಮಃ। ✠ ಓಂ ದ್ವಿಜಗಜಾರಿಸೂನವೇ ನಮಃ।

◆ಓಂ ವಿವಾಹಪುತ್ರಶತ್ರುಪುತ್ರಾಯ ನಮಃ।

ಓಂ ಶಕ್ತಿಹಸ್ತಾಯ ನಮಃ। ಓಂ ಶೂರ್ಪಕರ್ಣಾಯ ನಮಃ।

ಓಂ ಕಾಲಾಯ ನಮಃ। ಓಂ ಗೃಹಪತಯೇ ನಮಃ।

ಓಂ ಸೋಮಸೂರ್ಯಾಗ್ನಿಲೋಚನಾಯ ನಮಃ

ಓಂ ಪಾಶಾಂಕುಶಧರಾಯ ನಮಃ। ಓಂ ಪ್ರಾಕೃತಗುಣಾತೀತಾಯ ನಮಃ।40

ಓಂ ನಿರಂಜನಾಯ ನಮಃ। ಓಂ ಸಿದ್ಧಾರ್ಚಿತಪದಾಯ ನಮಃ।

ಓಂ ಬೀಜಪೂರಪ್ರಿಯಾಯ ನಮಃ। ಓಂ ವರದಾಯ ನಮಃ।

ಓಂ ಶಶ್ವದೇಕಪ್ರಕಾರಾಯ ನಮಃ। ಓಂ ಕೃತಿನೇ ನಮಃ।

ಓಂ ವಿದ್ವತ್ಪ್ರಿಯಾಯ ನಮಃ। ಓಂ ವೀತಭಯಾಯ ನಮಃ।

ಓಂ ಚಕ್ರಿಣೇ ನಮಃ। ಓಂ ಇಕ್ಷುಚಾಪಧೃತೇ ನಮಃ। 50

ಓಂ ಅಬ್ಜೋತ್ಪಲಕರಾಯ ನಮಃ। ಓಂ ಶ್ರೀದಾಯ ನಮಃ।

ಓಂ ಶ್ರೀ ಹೇತವೇ ನಮಃ। ಓಂ ಚಂದ್ರಚೂಡಾಯ ನಮಃ।

ಓಂ ರಾಮಾರ್ಚಿತಪದಾಯ ನಮಃ। ಓಂ ವ್ರತಿನೇ ನಮಃ। ಓಂ ಸ್ಥೂಲಕಂಠಾಯ ನಮಃ। ಓಂ ತ್ರಯೀಪ್ರತಿಪಾದ್ಯಾಯ ನಮಃ।ಓಂ ಸಾಮಘೋಷ ಪ್ರಿಯಾಯ ನಮಃ। ಓಂ ಪುರುಷೋತ್ತಮಾಯ ನಮಃ। 60

ಓಂ ಸ್ಥೂಲತುಂಡಾಯ ನಮಃ। ಓಂ ಅಗ್ರಗಣ್ಯಾಯ ನಮಃ।

ಓಂ ಗಣಾಧಿಪಾಯ ನಮಃ। ಓಂ ಸ್ಥಿರಾಯ ನಮಃ।

ಓಂ ಜ್ಞಾನವೃದ್ಧಾಯ ನಮಃ। ಓಂ ಸುಭಗಾಯ ನಮಃ।

---

✠ದ್ವಿಜ=ಪಕ್ಷಿ, ದ್ವಿಜಗ=ಪಕ್ಷಿಯವಾಹನನಾದ ನಾರಾಯಣನು, ದ್ವಿಜಗಜ=ನಾರಾಯಣನ ಪುತ್ರ ಮನ್ಮಥ, ದ್ವಿಜಗನ ಅರಿ=ಮನ್ಮಥಾರಿಯಾದ ರುದ್ರದೇವನು, ಅವನ ಸೂನು=ಎಂದರೆ ಪುತ್ರನು=ಗಣಪತಿ.

◆ಹಾಗೆಯೇ ವಿವಾಹ=ಗರುಡವಾಹನನಾದ ವಿಷ್ಣುವು-ಅವನ ಪುತ್ರ= ಮನ್ಮಥನು, ಅವನ ಶತ್ರು =ರುದ್ರನು, ಅವನ ಪುತ್ರನು ಗಣಪತಿ

---

ಓಂ ಶೂರಾಯ ನಮಃ। ಓಂ ಚಂದ್ರಗರ್ವಚ್ಛಿದೇ ನಮಃ।
ಓಂ ಸಿದ್ಧಿದಾಯ ನಮಃ। ಓಂ ದೂರ್ವಾಬಿಲ್ವಪ್ರಿಯಾಯ ನಮಃ। 70
ಓಂ ಕಾಂತಾಯ ನಮಃ। ಓಂ ಪಾಪಹಾರಿಣೇ ನಮಃ।
ಓಂ ವಕ್ರತುಂಡಾಯ ನಮಃ। ಓಂ ಭಕ್ತಕಾಂಕ್ಷಿತಾಯ ನಮಃ।
ಓಂ ಅಚ್ಯುತಾಯ ನಮಃ। ಓಂ ವಿಶ್ವಂಭರಾಯ ನಮಃ।
ಓಂ ಸಚ್ಚಿದಾನಂದ ವಿಗ್ರಹಾಯ ನಮಃ।
ಓಂ ಜಾಗ್ರದವಸ್ಥಾಪ್ರೇರಕಾಯ ನಮಃ।
ಓಂ ವಿಶ್ವಪ್ರಿಯಾಯ ನಮಃ। ಓಂ ಜಗದಾಧಾರಾಯ ನಮಃ। 80
ಓಂ ವರಮೂಷಕವಾಹನಾಯ ನಮಃ। ಓಂ ಮೋದಕ ಪ್ರಿಯಾಯ
ನಮಃ। ಓಂ ಖಪತಯೇ ನಮಃ। ಓಂ ಬಾಲಗಣಪತಯೇ ನಮಃ।
ಓಂ ಸರ್ಪಯಜ್ಞೋಪವೀತಿನೇ ನಮಃ। ಓಂ ಭಕ್ತಸಂಕಷ್ಟನಾಶಕಾಯ
ನಮಃ। ಓಂ ಶ್ರೀಕೃಷ್ಣಪುತ್ರಾಯ ನಮಃ। ಓಂ ಚಾರುದೇಷ್ಣಾಯ ನಮಃ।
ಓಂ ಸಿದ್ಧಿಬುದ್ಧಿದಾತ್ರೇ ನಮಃ। ಓಂ ವ್ಯಾಸಪ್ರಿಯಾಯ ನಮಃ। 90
ಓಂ ಮಹಾಭಾರತ ಲೇಖಕಾಯ ನಮಃ।
ಓಂ ಸಿಂಧೂರವದನಾಯ ನಮಃ।
ಓಂ ಸಿಂಧೂರವದನಪ್ರಿಯಾಯ ನಮಃ।
ಓಂ ತರುಣಾರುಣಸದೃಶಾಯ ನಮಃ।
ಓಂ ಮಹೋದರಾಯ ನಮಃ। ಓಂ ಸರ್ವಭೂತೋಪಕಾರಕಾಯ
ನಮಃ। ಓಂ ಕಪರ್ದಿಗಣಪತಯೇ ನಮಃ।
ಓಂ ಪ್ರದ್ಯುಮ್ನಗಣೇಶಾಯ ನಮಃ।
ಓಂ ಶುದ್ಧಾಂತಃ ಕರಣಾಯ ನಮಃ।
ಓಂ ದೂರ್ವಾಗಣಪತಯೇ ನಮಃ। 100
ಓಂ ಶ್ರೀ ವೈರಾಗ್ಯ ನಿಧಯೇ ನಮಃ। ಓಂ ಕಾಮಾರಿ ಸೂನವೇ ನಮಃ।
ಓಂ ಅಂಬಿಕಾ ಹೃದಯಾನಂದಾಯ ನಮಃ। ಓಂ ಮಾತೃಕಾಪರಿವೇಷ್ಟಿತಾಯ
ನಮಃ। ಓಂ ಮಾರಾರಿಪುತ್ರಾಯ ನಮಃ। ಓಂ ತಾರುಣ್ಯರೂಪಾಯ
ನಮಃ। ಓಂ ಕಲ್ಯಾಣಮೂರ್ತಯೇ ನಮಃ। ಓಂ ವಿಘ್ನಧ್ವಾಂತವಿಧ್ವಂಸ
ಕಾಯ ನಮಃ। 108

ಶ್ರೀ ವರಸಿದ್ಧಿವಿನಾಯಕಾಂತರ್ಗತ ಶ್ರೀ ವಿಶ್ವಂಭರಾಯ ನಮಃ
ಅಷ್ಟೋತ್ತರಶತನಾಮಾವಲೀಂ ಸಮರ್ಪಯಾಮಿ।

---

## ಧೂಪಮ್

ದಶಾಂಗಂ ಗುಗ್ಗುಲೋಪೇತಂ ಸುಗಂಧಂ ಚ ಮನೋಹರಂ।
ಗೃಹಾಣ ಸರ್ವದೇವೇಶ ಉಮಾಪುತ್ರ ನಮೋऽಸ್ತು ತೇ॥

ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್।
ಮುಖಂ ಕಿಮಸ್ಯ ಕೌ ಬಾಹೂ ಕಾವೂರೂ ಪಾದಾ ಉಚ್ಯೇತೇ॥
ಶ್ರೀ ಸಿದ್ಧಿವಿನಾಯಕಾಯ ನಮಃ ಧೂಪಮಾಘ್ರಾಪಯಾಮಿ।

## ದೀಪಂ

ಸರ್ವಜ್ಞ ಸರ್ವಲೋಕೇಶ ತ್ರೈಲೋಕ್ಯತಿಮಿರಾಪಹ।
ಗೃಹಾಣ ಮಂಗಲಂ ದೀಪಂ ರುದ್ರಪ್ರಿಯ ನಮೋऽಸ್ತು ತೇ।

ಬ್ರಾಹ್ಮಣೋऽಸ್ಯ ಮುಖಮಾಸೀತ್ ಬಾಹೂರಾಜನ್ಯಃ ಕೃತಃ।
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ॥
ಶ್ರೀ ಸಿದ್ಧಿವಿನಾಯಕಾಯ ನಮಃ ದೀಪಂ ದರ್ಶಯಾಮಿ।

## ❁ನೈವೇದ್ಯಮ್

ನಾನಾಖಾದ್ಯಮಯಂ ದಿವ್ಯಂ ನೈವೇದ್ಯಂ ತೇ ನಿವೇದಿತಂ।
ಮಯಾ ಭಕ್ತ್ಯಾ ಶಿವಾಪುತ್ರ ಗೃಹಾಣ ಗಣನಾಯಕ॥

ಕದಲೀ ಫಲಮುಖ್ಯಾನಿ ಫಲಾನಿ ವಿವಿಧಾನಿ ಚ।
ಆಹೃತಾನಿ ಮಯಾ ದೇವ ಗೃಹಾಣ ವರದೋ ಭವ।

---

❁ ಗಣಪತಿಗೆ ಹರಿನಿವೇದಿತವಾದ ಫಲಾದಿಗಳನ್ನು ನೈವೇದ್ಯವನ್ನು ಮಾಡಿದರೆ ಸಾಕು. ಭಗವದರ್ಪಿತವಾದ ಅನ್ನಾದಿಗಳನ್ನು ನಿವೇದನೆ ಬೇಕಾಗಿಲ್ಲ. ಅಥವಾ ಅನ್ನಾದಿಗಳನ್ನು ಬೇರೆ ಎಲೆಯಲ್ಲಿ ಬಡಿಸಿಕೊಂಡು ಅದನ್ನು ನಿವೇದಿಸಿ ವಿಸರ್ಜಿಸುವುದು. (ಮುಂದಿನ ಪುಟ ನೋಡಿ)

ಚಂದ್ರಮಾ ಮನಸೋಜಾತಃ ಚಕ್ಷೋಃ ಸೂರ್ಯೋಽಜಾಯತ।

ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ॥

ಓಂ ಭೂರ್ಭುವಸ್ಸ್ವಃ। ತತ್ಸವಿತುರ್ವರೇಣ್ಯಂ। ಭರ್ಗೋ ದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್। ಓಂ ಸತ್ಯಂ ತ್ವರ್ತ್ವೇನ ಪರಿಷಿಂಚಾಮಿ। ಓಂ ಅಮೃತೋಪಸ್ತರಣಮಸಿ ಸ್ವಾಹಾ। ಶ್ರೀ ಮಹಾಗಣಪತಯೇ ನಮಃ। ಶ್ರೀಹರಿ ನಿವೇದಿತ ನೈವೇದ್ಯಂ ಸಮರ್ಪಯಾಮಿ। ಓಂ ಪ್ರಾಣಾಯ ಸ್ವಾಹಾ। ಓಂ ಅಪಾನಾಯ ಸ್ವಾಹಾ। ಓಂ ವ್ಯಾನಾಯ ಸ್ವಾಹಾ। ಓಂ ಉದಾನಾಯ ಸ್ವಾಹಾ। ಓಂ ಸಮಾನಾಯಸ್ವಾಹಾ। ಓಂ ಬ್ರಹ್ಮಣೇ ನಮಃ। ಓಂ ಕ್ಷಿಪ್ರ ಪ್ರಸಾದಾಯ ನಮಃ। ನಾನಾವಿಧ ಫಲಾನಿ ಸಮರ್ಪಯಾಮಿ। ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ।❁

## ಮೋದಕಾಃ

ಸಘೃತಂ ಸಗುಡಂ ಚೈವ ಮೋದಕಾನ್ ಘೃತ ಪಾಚಿತಾನ್।
ನೈವೇದ್ಯಂ ಗೃಹ್ಯತಾಂ ದೇವ ಸರ್ವಸಿದ್ಧಿಪ್ರದೋ ಭವ॥

ಏಕವಿಂಶತಿಸಂಖ್ಯಾಕಾನ್ ಮೋದಕಾನ್ ಘೃತಪಾಚಿತಾನ್।
ನೈವೇದ್ಯಂ ಸಫಲಂ ದದ್ಯಾಂ ನಮಸ್ತೇ ವಿಘ್ನನಾಶಿನೇ॥
ಸಿದ್ಧಿವಿನಾಯಕಾಯ ನಮಃ ಹರಿನಿವೇದಿತ ಏಕವಿಂಶತಿ ಮೋದಕಾನ್ ಸಮರ್ಪಯಾಮಿ। ಅಮೃತಾಪಿಧಾನಮಸಿ ಸ್ವಾಹಾ।
ಉತ್ತರಾಪೋಶನಾರ್ಥೇ ಉದಕಂ ಸಮರ್ಪಯಾಮಿ।
ಹಸ್ತಪ್ರಕ್ಷಾಲನಂ ಸಮರ್ಪಯಾಮಿ।
ಮುಖಪ್ರಕ್ಷಾಲನಂ ಸಮರ್ಪಯಾಮಿ।
ಗಂಡೂಷಂ ಸಮರ್ಪಯಾಮಿ।

## ಆಚಮನಂ

ಗಂಗಾಜಲಸಮಾನೀತಂ ಸುವರ್ಣಕಲಶೇ ಸ್ಥಿತಂ।
ಆಚಮ್ಯತಾಂ ಮಹಾಭಾಗ ಪುನರಾಚಮನಂ ಸ್ಮೃತಂ॥

---

❁ಗರುಡ ಶೇಷಾದಿಗಳ ನೈವೇದ್ಯವನ್ನ ವಿಸರ್ಜಿಸುವ ನಮ್ಮ ಪದ್ಧತಿಯಲ್ಲಿ ಗಣಪತಿಯ ನೈವೇದ್ಯವನ್ನು ಸ್ವೀಕರಿಸಲು ವಿಶೇಷ ಪ್ರಮಾಣವಿರುವುದಿಲ್ಲ ಇದಕ್ಕೆ ಬದಲಾಗಿ "ಅನ್ಯದೇವಸ್ಯ ನೈವೇದ್ಯಂ ಭುಕ್ತ್ವಾ ಚಾಂದ್ರಾಯಣಂ ಚರೇತ್" ಎಂಬ ನಿರವಕಾಶಪ್ರಮಾಣವು ಪರಮಾತ್ಮ ಹಾಗೂ ಪರಶುಕ್ಲತ್ರಯರ ನೈವೇದ್ಯವನ್ನು ಬಿಟ್ಟು ಇತರರ ನೈವೇದ್ಯವನ್ನು ಸ್ವೀಕರಿಸಲು ನಿಷೇಧಿಸುತ್ತದೆ. ಪೂಜೆಮಾಡಿದ ದೇವತೆಯ ನೈವೇದ್ಯವನ್ನು ಸ್ವೀಕರಿಸಲೇಬೇಕೆಂಬ ವಿಧಿ ಇರುವುದಿಲ್ಲ.

❖ತಾಂಬೂಲಮ್

ಪೂಗಿಫಲಸಮಾಯುಕ್ತಂ ನಾಗವಲ್ಲ್ಯಾ ಸಮನ್ವಿತಂ।
ಕರ್ಪೂರೈಲಾಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್॥

ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಸ್ಸಮವರ್ತತ।
ಪದ್ಭ್ಯಾಂ ಭೂಮಿರ್ದಿಶಶ್ಶ್ರೋತ್ರಾತ್ತಥಾ ಲೋಕಾ ಅಕಲ್ಪಯನ್॥
ಶ್ರೀ ಸಿದ್ಧಿವಿನಾಯಕಾಯ ನಮಃ। ಕ್ರಮುಕತಾಂಬೂಲಂ ಸಮರ್ಪಯಾಮಿ।

ದಕ್ಷಿಣಾಃ

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ।
ಅನಂತಪುಣ್ಯಫಲದಂ ಅತಃ ಶಾಂತಿಂ ಪ್ರಯಚ್ಛ ಮೇ॥
ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ।

ಶ್ರಿಯೇ ಜಾತಃ ಶ್ರಿಯ ಆ ನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದಧಾತಿ। ಶ್ರಿಯಂ ವಸಾನಾ ಅಮೃತತ್ವಮಾಯನ್ ಭವಂತಿ ಸತ್ಯಾ ಸಮಿಥಾ ಮಿತದ್ರೌ।

ಅರ್ಚತ ಪ್ರಾರ್ಚತ ಪ್ರಿಯ ಮೇಧಾಸೋ ಅರ್ಚತ।
ಅರ್ಚಂತು ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ।
ಚಂದ್ರಾದಿತ್ಯೌ ಚ ಧರಣೀ ವಿದ್ಯುದಗ್ನಿಸ್ತಥೈವ ಚ।
ತ್ವಮೇವ ಸರ್ವತೇಜಾಂಸಿ ಆರ್ತಿಕ್ಯಂ ಪ್ರತಿಗೃಹ್ಯತಾಮ್॥
ಶ್ರೀ ಸಿದ್ಧಿವಿನಾಯಕಾಯ ನಮಃ
ಮಂಗಲನೀರಾಜನಂ ಸಮರ್ಪಯಾಮಿ।

---

❖ತಾಂಬೂಲವು ಬ್ರಹ್ಮಚಾರಿಗೆ ನಿಷಿದ್ಧವಾದ್ದರಿಂದ ತಾಂಬೂಲವನ್ನು ಗಣಪತಿಗೆ ನೀಡುವುದೆಂದರೆ ಸ್ವೀಕರಿಸುವುದಕ್ಕಾಗಿಯಲ್ಲ. ಬ್ರಹ್ಮಚಾರಿಗೆ ತಾಂಬೂಲವನ್ನು ನಾವು ಕೊಟ್ಟಂತೆ ಹೊರತು ಹಾಕಿಕೊಳ್ಳಲು ಅಲ್ಲವೆಂದು ತಿಳಿಯಬೇಕು ದಾನ ಕೊಟ್ಟದ್ದೆಲ್ಲವನ್ನೂ ತಿನ್ನಲೇಬೇಕೆಂಬ ನಿಯಮವೂ ಇರುವುದಿಲ್ಲ.

## ದೂರ್ವಾಯುಗ್ಮಪೂಜಾ

ಗಣಾಧಿಪಾಯ ನಮಃ। ದೂರ್ವಾಯುಗ್ಮಂ ಸಮರ್ಪಯಾಮಿ।
ಉಮಾಪುತ್ರಾಯ ನಮಃ। ದೂರ್ವಾಯುಗ್ಮಂ ಸಮರ್ಪಯಾಮಿ।
ಅಘನಾಶನಾಯ ನಮಃ। ದೂರ್ವಾಯುಗ್ಮಂ ಸಮರ್ಪಯಾಮಿ।
ವಿನಾಯಕಾಯ ನಮಃ। ದೂರ್ವಾಯುಗ್ಮಂ ಸಮರ್ಪಯಾಮಿ।
ಈಶಪುತ್ರಾಯ ನಮಃ। ದೂರ್ವಾಯುಗ್ಮಂ ಸಮರ್ಪಯಾಮಿ।
ಸರ್ವಸಿದ್ಧಿಪ್ರದಾಯ ನಮಃ। ದೂರ್ವಾಯುಗ್ಮಂ ಸಮರ್ಪಯಾಮಿ।
ಏಕದಂತಾಯ ನಮಃ। ದೂರ್ವಾಯುಗ್ಮಂ ಸಮರ್ಪಯಾಮಿ।
ಇಭವಕ್ತ್ರಾಯ ನಮಃ। ದೂರ್ವಾಯುಗ್ಮಂ ಸಮರ್ಪಯಾಮಿ।
ಆಖುವಾಹನಾಯ ನಮಃ। ದೂರ್ವಾಯುಗ್ಮಂ ಸಮರ್ಪಯಾಮಿ।
ಕುಮಾರಗುರವೇ ನಮಃ। ದೂರ್ವಾಯುಗ್ಮಂ ಸಮರ್ಪಯಾಮಿ।

ಗಣಾಧಿಪ ನಮಸ್ತೇಽಸ್ತು ಉಮಾಪುತ್ರಾಘನಾಶನ।
ಏಕದಂತೇಭವಕ್ತ್ರೇತಿ ತಥಾ ಮೂಷಕವಾಹನ॥

ವಿನಾಯಕೇಶಪುತ್ರೇತಿ ಸರ್ವಸಿದ್ಧಿಪ್ರದಾಯಕ।
ಕುಮಾರಗುರವೇ ತುಭ್ಯಂ ಪೂಜನೀಯಃ ಪ್ರಯತ್ನತಃ॥

ದೂರ್ವಾಯುಗ್ಮಂ ಗೃಹೀತ್ವಾ ತು ಗಂಧಯುಕ್ತಂ ಪ್ರಪೂಜಯೇತ್।
ಏಕೈಕೇನ ತು ನಾಮ್ನಾ ಚ ದತ್ತ್ವೈಕಂ ಸರ್ವನಾಮಭಿಃ।

ಶ್ರೀ ಸಿದ್ಧಿವಿನಾಯಕಾಯ ನಮಃ ಏಕವಿಂಶತಿ ದೂರ್ವಾಂ ಸಮರ್ಪಯಾಮಿ।

## ಪುನಃ ನೀರಾಜನಂ

ಗುಹಾಗ್ರಜ ನಮಸ್ತೇಽಸು ವಿಘ್ನರಾಜ ಶಿವಾತ್ಮಜ।
ನೀರಾಜನಂ ಕರಿಷ್ಯಾಮಿ ಸರ್ವಸಿದ್ಧಿಪ್ರದಾಯಕ॥

## ಮಂತ್ರ ಪುಷ್ಪಂ

ಆತೂನ ಇಂದ್ರ ಕ್ಷುಮಂತಂ ಚಿತ್ರಂ ಗ್ರಾಭಂ ಸಂಗೃಭಾಯ।
ಮಹಾಹಸ್ತೀ ದಕ್ಷಿಣೇನ।

ಶ್ರೀ ಸಿದ್ಧಿವಿನಾಯಕಾಯ ನಮಃ ವೇದೋಕ್ತ ಮಂತ್ರ ಪುಷ್ಪಾಣಿ ಸಮರ್ಪಯಾಮಿ।

ಛತ್ರಂ ಸಮರ್ಪಯಾಮಿ। ಚಾಮರಂ ಸಮರ್ಪಯಾಮಿ।
ದರ್ಪಣಂ ಸಮರ್ಪಯಾಮಿ। ವ್ಯಜನಂ ಸಮರ್ಪಯಾಮಿ।
ನೃತ್ಯಂ ಸಮರ್ಪಯಾಮಿ। ಗೀತಂ ಸಮರ್ಪಯಾಮಿ।
ವಾದ್ಯಂ ಸಮರ್ಪಯಾಮಿ। ಪುಷ್ಪವೃಷ್ಟಿಂ ಸಮರ್ಪಯಾಮಿ।

## ಪ್ರದಕ್ಷಿಣಾಃ

ವಿಘ್ನೇಶ್ವರ ವಿಶಾಲಾಕ್ಷ ಸರ್ವಾಭೀಷ್ಟಫಲಪ್ರದ।
ಪ್ರದಕ್ಷಿಣಂ ಕರೋಮಿ ತ್ವಾಂ ಸರ್ವಾನ್ ಕಾಮಾನ್ ಪ್ರಯಚ್ಛ ಮೇ॥

ಸಪ್ತಾಸ್ಯಾಸನ್ ಪರಿಧಯಃ ತ್ರಿಸ್ಸಪ್ತಸಮಿಧಃ ಕೃತಾಃ।
ದೇವಾ ಯದ್ಯಜ್ಞಂ ತನ್ವಾನಾಃ ಅಬಧ್ನನ್ ಪುರುಷಂ ಪಶುಂ॥

## ನಮಸ್ಕಾರಃ

ಶಿರಸಾ ಉರಸಾ ದೃಷ್ಟ್ಯಾ ಮನಸಾ ವಚಸಾ ತಥಾ।
ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ॥

ವ್ರತಕೋಟಿ ಸಹಸ್ರಾಣಿ ತೀರ್ಥಕೋಟಿ ಶತಾನಿ ಚ।
ನಾರಾಯಣಪ್ರಣಾಮಸ್ಯ ಕಲಾಂ ನಾರ್ಹಂತಿ ಷೋಡಶೀಂ॥

ಶ್ರೀಸಿದ್ಧಿವಿನಾಯಕಾಂತರ್ಯಾಮಿ ಶ್ರೀವಿಶ್ವಂಭರಾಯ ನಮಃ।
ನಮಸ್ಕಾರಾನ್ ಸಮರ್ಪಯಾಮಿ॥

ವಿನಾಯಕ ಗಣೇಶಾನ ಸರ್ವದೇವ ನಮಸ್ಕೃತ।
ಪಾರ್ವತೀಪ್ರಿಯ ವಿಘ್ನೇಶ ಮಮ ವಿಘ್ನಂ ವಿನಾಶಯ॥

ಯಜ್ಞೇನ ಯಜ್ಞಮಯಜಂತ ದೇವಾಃ ತಾನಿ ಧರ್ಮಾಣಿ
ಪ್ರಥಮಾನ್ಯಾಸನ್। ತೇಹ ನಾಕಂ ಮಹಿಮಾನಃ ಸಚಂತ
ಯತ್ರ ಪೂರ್ವೇ ಸಾಧ್ಯಾ ಸಂತಿ ದೇವಾಃ॥

ನಮಸ್ತೇ ವಿಘ್ನರಾಜಾಯ ಅಭೀಷ್ಟವರದಾಯಿನೇ।
ಈಪ್ಸಿತಂ ಮೇ ವರಂ ದೇಹಿ ನಮಸ್ತೇ ಸಿದ್ಧಿದಾಯಕ॥

ಯನ್ಮಯಾ ಚರಿತಂ ದೇವ ವ್ರತಮೇತತ್ ಸುದುರ್ಲಭಂ।
ಗಣೇಶ ತ್ವಂ ಪ್ರಸನ್ನಃ ಸನ್ ಸಫಲಂ ಕುರು ಸರ್ವದಾ॥

ಕಾರ್ಯಂ ಮೇ ಸಿದ್ಧಿಮಾಯಾತು ಪೂಜಿತೇ ತ್ವಯಿ ದಾತರಿ।
ವಿಘ್ನಾನಿ ನಾಶಮಾಯಾಂತು ಸರ್ವಾಣಿ ಸುರನಾಯಕ॥

ಶ್ರೀ ಸಿದ್ಧಿವಿನಾಯಕಾಂತರ್ಯಾಮಿ ಶ್ರೀ ವಿಶ್ವಂಭರಾಯ ನಮಃ।
ಪ್ರಾರ್ಥನಾಂ ಸಮರ್ಪಯಾಮಿ॥

## ಫಲದಾನಮ್

ಇದಂ ಫಲಂ ಮಯಾ ದೇವ ಸ್ಥಾಪಿತಂ ಪುರತಸ್ತವ।
ತೇನ ಮೇ ಸಫಲಾವಾಪ್ತಿಃ ಭವೇಜ್ಜನ್ಮನಿ ಜನ್ಮನಿ॥

## ಅರ್ಘ್ಯಪ್ರದಾನಮ್

ಗೌರೀಮಲಜಸಂಭೂತ ಜ್ಯೇಷ್ಠಸ್ವಾಮಿಕುಮಾರಕ।
ಗೃಹಾಣಾರ್ಘ್ಯಂ ಮಯಾ ದತ್ತಂ ಗಜವಕ್ತ್ರ ನಮೋಽಸ್ತು ತೇ॥

ಶ್ರೀ ಸಿದ್ಧಿವಿನಾಯಕಾಯ ನಮಃ ಇದಮರ್ಘ್ಯಮಿದಮರ್ಘ್ಯಮಿದಮರ್ಘ್ಯಂ।

## ಶ್ರೀಕೃಷ್ಣಾರ್ಪಣಮ್

ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ।
ತನ್ನೋ ವಿಷ್ಣುಃ ಪ್ರಚೋದಯಾತ್॥

ತತ್ಪುರುಷಾಯ ವಿದ್ಮಹೇ ವಕ್ರತುಂಡಾಯ ಧೀಮಹಿ।
ತನ್ನೋ ದಂತಿಃ ಪ್ರಚೋದಯಾತ್॥

ಅಂತಶ್ಚರತಿ ಭೂತೇಷು ಗುಹಾಯಾಂ ಸರ್ವಮೂರ್ತಿಷು।
ತ್ವಂ ಯಜ್ಞಸ್ತ್ವಂ ವಷಟ್ಕಾರಸ್ತ್ವಮಿಂದ್ರಸ್ತ್ವಗ್ಂ ರುದ್ರಸ್ತ್ವಂ ವಿಷ್ಣುಸ್ತ್ವಂ ಬ್ರಹ್ಮತ್ವಂ ಪ್ರಜಾಪತಿಃ॥

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ॥

ಅನೇನ ಮಯಾ ಕೃತೇನ (ಕಾರಿತೇನ) ಸಿದ್ಧಿವಿನಾಯಕವ್ರತಾಂಗ ಪೂಜಾ ಕರ್ಮಣಾ ಶ್ರೀ ಸಿದ್ಧಿವಿನಾಯಕಾಂತರ್ಗತ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ವಿಶ್ವಂಭರಃ ಪ್ರೀಯತಾಮ್।

ಪ್ರೀತೋ ವರದೋ ಭವತು। ಶ್ರೀಕೃಷ್ಣಾರ್ಪಣಮಸ್ತು।

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ ಅನುಸೃತಃ ಸ್ವಭಾವಂ। ಕರೋಮಿ ಯದ್ಯತ್ ಸಕಲಂ ಪರಸ್ಮೈ ಶ್ರೀ ಮನ್ನಾರಾಯಣಾಯೇತಿ ಸಮರ್ಪಯಾಮಿ।

## ❑ಮೋದಕ-ವಾಯನ ದಾನಂ

ಆಚಮ್ಯ-ಪ್ರಾಣಾನಾಯಮ್ಯ-ಶುಭತಿಥೌ ಸಿದ್ಧಿ ವಿನಾಯಕಾಂತರ್ಗತ ಶ್ರೀಭಾರತೀ-ಮುಖ್ಯ ಪ್ರಾಣಾಂತರ್ಗತ ಶ್ರೀವಿಶ್ವಂಭರ ಪ್ರೇರಣಯಾ ವಿಶ್ವಂಭರ ಪ್ರೀತ್ಯರ್ಥಂ ವ್ರತಮಧ್ಯೇ ಸಂಭಾವಿತದೋಷ ಪ್ರಯುಕ್ತ ಪ್ರಾಪ್ತ ನ್ಯೂನತಾ ದೋಷ ಪರಿಹಾರ ದ್ವಾರಾ ಸಂಪೂರ್ಣವ್ರತಫಲಸಿದ್ಧ್ಯರ್ಥಂ ಬ್ರಾಹ್ಮಣಾಂತ-ರ್ಯಾಮಿ ಶ್ರೀವಿಶ್ವಂಭರಂ ವಾಯನಮೋದಕದಾನೇನ ಪೂಜಯಿಷ್ಯೇ।

ಓಂ ನಮೋಸ್ತ್ವನಂತಾಯ ಸಹಸ್ರಮೂರ್ತಯೇ ಸಹಸ್ರಪಾದಾಕ್ಷಿ ಶಿರೋರು ಬಾಹವೇ।
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ಸಹಸ್ರಕೋಟಿ ಯುಗ ಧಾರಿಣೇ ಬ್ರಾಹ್ಮಣಾಯ ಇದಮಾಸನಂ॥

ಸುಖಾಸನಂ। ಇದಂ ಪಾದ್ಯಂ ಸುಪಾದ್ಯಂ। ಇದಮರ್ಘ್ಯಂ ಅಸ್ತ್ವರ್ಘ್ಯಂ। ಇದಮಾಚಮನೀಯಂ। ಗಂಧಾಃ ಪಾಂತು। ಸೌಮಂಗಲ್ಯಂ ಚಾಸ್ತು। ಅಕ್ಷತಾಃ

---

❑ವಾಯನದಾನ - ದಾನಮಾಡುವವರು ಎರಡು ತೆಂಗಿನಕಾಯಿ ಹಾಗೂ ಐದೈದು ವೀಳೆದೆಲೆ ಅಡಿಕೆ, ಹಣ್ಣುಗಳನ್ನು ದಕ್ಷಿಣೆ ಸಹಿತವಾಗಿ ಅರ್ಧಸೇರು ಅಕ್ಕಿಯ ಜೊತೆಗೆ ಇಟ್ಟು ಎರಡು ಬಾಳೆ ಎಲೆ ಮೇಲೆ ಮುಚ್ಚಿ ಬ್ರಾಹ್ಮಣನನ್ನು ಪೂರ್ವಕ್ಕೆ ಕೂಡಿಸಿ, ಉತ್ತರಕ್ಕೆ ದಾನಿಯು ಮುಖ ಮಾಡಿ, ಅಕ್ಷತೆಯನ್ನು ಬ್ರಾಹ್ಮಣನ ಮೇಲೆ ಹಾಕಿ ಗಣಪತಿ ಅಂತರ್ಯಾಮಿಯಾದ ವಿಶ್ವಂಭರ ನನ್ನು ಆವಾಹಿಸಿ ಸಂಕಲ್ಪವನ್ನು ಮಾಡಿ ದಾನವನ್ನು ಮಾಡಬೇಕು. ಭಗವಂತನಿಗೆ ನಿವೇದಿಸಿದ ಹತ್ತು ಮೋದಕಗಳನ್ನು ಬ್ರಾಹ್ಮಣನಿಗೆ ಅರ್ಪಿಸಬೇಕು. ಲಕ್ಷ್ಮೀನಾರಾಯಣರಿಗೆ ಕೊಡುವುದಾದ್ದರಿಂದ ಎರಡು ತಾಂಬೂಲಗಳು, ಎರಡು ತೆಂಗಿನಕಾಯಿಗಳು ಎರಡು ತಾಂಬೂಲ ದಲ್ಲಿಯೂ ದಕ್ಷಿಣೆ ಫಲಾದಿಗಳನ್ನಿಡಬೇಕು ಶಕ್ತಿರಾಹಿತ್ಯಕ್ಕೆ ತಕ್ಕಂತೆ ದಕ್ಷಿಣೆಯನ್ನಿಡಬೇಕು.

ಪಾಂತು। ಆಯುಷ್ಯಮಸ್ತು। ಪುಷ್ಟಾಣಿ ಪಾಂತು। ಸೌಶ್ರಿಯಮಸ್ತು।

ಗೃಹಾಣೇದಂ ದ್ವಿಜಶ್ರೇಷ್ಠ ವಾಯನಂ ದಕ್ಷಿಣಾನ್ವಿತಂ।
ಫಲತಂಡುಲಸಂಯುಕ್ತಂ ದಕ್ಷಿಣಾಘೃತಸಂಯುತಂ॥

ಮೋದಕಾದಿಯುತಂ ಚೈವ ಅಪೂಪಾದಿಯುತಂ ತಥಾ।
ಸಫಲಾಂಸ್ತು ಗುಡಾಜ್ಯಾಢ್ಯಾನ್ ದಾಸ್ಯಾಮಿ ದಶ ಮೋದಕಾನ್॥
ಸದಕ್ಷಿಣಾನ್ ದ್ವಿಜಶ್ರೇಷ್ಠ ಗಣೇಶಃ ಪ್ರೀಯತಾಂ ಮಮ।

ಗಣೇಶಃ ಪ್ರತಿಗೃಹ್ಣಾತಿ ಗಣೇಶೋ ವೈ ದದಾತಿ ಚ।
ಗಣೇಶಸ್ತಾರಕೋಭಾಭ್ಯಾಂ ಗಣೇಶಾಯ ನಮೋ ನಮಃ॥

ಏತದಪೂಪಮೋದಕಸಹಿತಮುಪಾಯನದಾನಂ ಸದಕ್ಷಿಣಾಕಂ ಸತಾಂಬೂಲಂ ವಿಘ್ನರಾಜಾಂತರ್ಗತ ಶ್ರೀ ವಿಶ್ವಂಭರರೂಪಿ ಶ್ರೀಪರಮಾತ್ಮನಃ ಪ್ರೀತಿಂ ಕಾಮಯಮಾನಃ, ಗೋತ್ರೋದ್ಭವಸ್ಯ - ನಾಮಧೇಯಸ್ಯ - ತುಭ್ಯಂ ಸಂಪ್ರದದೇ। ದತ್ತಂ ನ ಮಮ। ಪ್ರತಿಗೃಹ್ಯತಾಮ್

ಬ್ರಾಹ್ಮಣಃ - ಏಷ ಪ್ರತಿಗೃಹ್ಣಾಮಿ। ಸಂಪೂರ್ಣಫಲಾವಾಪ್ತಿರಸ್ತು। ಅನೇನ ವಾಯನದಾನೇನ ಗಣೇಶಾಂತರ್ಗತ ಶ್ರೀ ವಿಶ್ವಂಭರಃ ಪ್ರೀತೋ ಭವತು॥

ಅಬುದ್ಧಮತಿರಿಕ್ತಂ ಯದ್ ದ್ರವ್ಯಹೀನಂ ಮಯಾ ಕೃತಂ।
ತತ್ಸರ್ವಂ ಪೂರ್ಣತಾಂ ಯಾತು ವಿಶ್ವಂಭರ ಗಣೇಶ್ವರ॥

ಅನೇನ ಸಿದ್ಧಿವಿನಾಯಕವ್ರತಾಚರಣೇನ ಸಿದ್ಧಿವಿನಾಯಕಾಂತರ್ಯಾಮಿ ಶ್ರೀ ವಿಶ್ವಂಭರಃ ಪ್ರೀಯತಾಮ್।

ಶ್ರೀ ಕೃಷ್ಣಾರ್ಪಣಮಸ್ತು

## ಗಣಪತಿ ವಿಸರ್ಜನೆ

ಆಚಮ್ಯ - ಪ್ರಾಣಾನಾಯಮ್ಯ - ಶುಭತಿಥೌ - ಶ್ರೀ ಸಿದ್ಧಿವಿನಾಯಕಾಂತರ್ಗತ ಶ್ರೀಭಾರತೀರಮಣ-ಮುಖ್ಯ ಪ್ರಾಣಾಂತರ್ಗತ ಶ್ರೀ ವಿಶ್ವಂಭರ ಪ್ರೇರಣಯಾ, ಶ್ರೀ ವಿಶ್ವಂಭರ ಪ್ರೀತ್ಯರ್ಥಂ ಗಣಪತಿ ವಿಸರ್ಜನಾಂಗ ಉತ್ತರಪೂಜಾಂ ಕರಿಷ್ಯೇ।

## ಪಂಚೋಪಚಾರ ಪೂಜಾ

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪ ವಶ್ರವಸ್ತಮಂ। ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂತಿಭಿಃ ಸೀದ ಸಾದನಮ್॥ (ಋ-21/23)

ಶ್ರೀ ಮಹಾ ಸಿದ್ಧಿವಿನಾಯಕಾಯ ನಮಃ।

ಗಂಧಂ ಸಮರ್ಪಯಾಮಿ। ಪುಷ್ಪೈಃ ಪೂಜಯಾಮಿ।

ಸುಮುಖಾಯ ನಮಃ। ಏಕದಂತಾಯ ನಮಃ। ಕಪಿಲಾಯ ನಮಃ। ಗಜಕರ್ಣಿಕಾಯ ನಮಃ। ಲಂಬೋದರಾಯ ನಮಃ। ವಿಕಟಾಯ ನಮಃ। ವಿಘ್ನರಾಜಾಯ ನಮಃ। ಗಣಾಧಿಪಾಯ ನಮಃ। ಧೂಮಕೇತವೇ ನಮಃ। ಗಣಾಧ್ಯಕ್ಷಾಯ ನಮಃ। ಫಾಲಚಂದ್ರಾಯ ನಮಃ। ಗಜಾನನಾಯ ನಮಃ। ಧೂಪಮಾಘ್ರಾಪಯಾಮಿ। ದೀಪಂ ದರ್ಶಯಾಮಿ। ನೈವೇದ್ಯಂ ಸಮರ್ಪಯಾಮಿ। ಹಸ್ತ ಪ್ರಕ್ಷಾಲನಂ ಸಮರ್ಪಯಾಮಿ। ತಾಂಬೂಲಂ ಸಮರ್ಪಯಾಮಿ। ದಕ್ಷಿಣಾಂ ಸಮರ್ಪಯಾಮಿ। ಮಹಾನೀರಾಜನಂ ಸಮರ್ಪಯಾಮಿ। ಮಂತ್ರ ಪುಷ್ಪಾಂಜಲಿಂ ಸಮರ್ಪಯಾಮಿ। ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ।

ಅನೇನ ವಿಸರ್ಜನಾಂಗ ಉತ್ತರ ಪೂಜನೇನ ಸಿದ್ಧಿವಿನಾಯಕಾಂತರ್ಗತ ಶ್ರೀ ವಿಶ್ವಂಭರಃ ಪ್ರೀಯತಾಮ್। ಪ್ರೀತೋ ವರದೋ ಭವತು ಶ್ರೀ ಕೃಷ್ಣಾರ್ಪಣ ಮಸ್ತು।

## ಉದ್ವಾಸನೆ (ಕದಲಿಸುವುದು)

ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ।

ಉಪ ಪ್ರ ಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ ಸಚಾ (ಋ-೧/೪೦)

ಯಾಂತು ದೇವಗಣಾಃ ಸರ್ವೇ ಪೂಜಾಮಾದಾಯ ಮತ್ಕೃತಾಂ।
ಇಷ್ಟಕಾಮ್ಯಾರ್ಥಸಿದ್ಧ್ಯರ್ಥಂ ಪುನರಾಗಮನಾಯ ಚ॥
ಶ್ರೀ ಸಿದ್ಧಿವಿನಾಯಕಾಯ ನಮಃ। ಯಥಾಸ್ಥಾನಮುದ್ವಾಸಯಾಮಿ।○

ಶ್ರೀಕೃಷ್ಣಾರ್ಪಣಮಸ್ತು

---

## ಗಣೇಶ ಕಥಾ ಸ್ಯಮಂತಕೋಪಾಖ್ಯಾನ

ನೈಮಿಷಾರಣ್ಯದಲ್ಲಿ ಸಕಲಪುರಾಣವೇತ್ತರಾದ ಸೂತ ಪುರಾಣಿಕರನ್ನು ಶೌನಕಾದಿ ಮಹರ್ಷಿಗಳು ವಿಘ್ನೇಶನ ಕಥೆಯನ್ನು ಹೇಳಿರಿ ಎಂದು ಪ್ರಾರ್ಥಿಸಿದಾಗ ಪೂಜ್ಯರಾದ ಸೂತ ಪುರಾಣಿಕರು ಈ ರೀತಿ ಕಥೆಯನ್ನು ವಿಸ್ತರಿಸಿದರು.

ಗಣಪತಿಯು ಪರಮಾತ್ಮನ ಮಹಾಭಕ್ತನಾಗಿದ್ದು ಭಕ್ತರ ಸಕಲೇಷ್ಟಗಳನ್ನು ಪೂರೈಸುವವನಾಗಿದ್ದಾನೆ. ಗಣಪತಿಗೆ ಪ್ರಿಯವಾದ ತಿಥಿಯು ಚತುರ್ಥಿಯು ಅದರಲ್ಲೂ ಭಾದ್ರಪದ ಮಾಸದ ಶುಕ್ಲ ಚತುರ್ಥಿಯು ಅತ್ಯಂತ ಪ್ರಿಯವಾದದ್ದು.

ಅಂದು ಯಾರು ಭಕ್ತಿಯಿಂದ ಗಣಪತಿಯ ಅಂತರ್ಯಾಮಿಯಾದ ಶ್ರೀವಿಶ್ವನಾಮಕ ಜಾಗ್ರದವಸ್ಥಾ ಪ್ರೇರಕನನ್ನು ಪೂಜಿಸುವರೋ ಅವರಿಗೆ ಅಂತರ್ಯಾಮಿಯು ಸಕಲೇಷ್ಟಗಳನ್ನು ಕೊಡುವನು.

---

○ ಗಣಪತಿ ವಿಸರ್ಜನೆಯ ಕ್ರಮ: ಗಣಪತಿ ಹಾಗೂ ಗೌರಿಯ ಪೂಜೆಯನ್ನು ಮಾಡಿ ಸಂಜೆ ಪುನಃ ಪಂಚೋಪಚಾರ ಪೂಜೆಯನ್ನು ಗೌರೀಗಣೇಶ ಇಬ್ಬರಿಗೂ ಮಾಡಿ, ಇಪ್ಪತ್ತೊಂದು ಪ್ರದಕ್ಷಿಣೆ ಹಾಗೂ ನಮಸ್ಕಾರಗಳನ್ನು ಹಾಕಬೇಕು.

ಪೂಜಾನಂತರ ಬ್ರಾಹ್ಮಣ ಹಾಗೂ ಸುವಾಸಿನಿಯರಿಗೆ ನಿವೇದಿತ ಕೋಸಂಬರಿ, ಹಣ್ಣು, ತಾಂಬೂಲಾದಿಗಳನ್ನು ಕೊಟ್ಟು, ಅವರ ಅನುಮತಿಯನ್ನು ಕೇಳಿ ಗೌರಿ ಹಾಗೂ ಗಣಪತಿಗಳನ್ನು ವಿಸರ್ಜಿಸುವುದು ವಿಸರ್ಜಿಸಿದ ನಂತರ ದೇವತೆಯು ತನ್ನ ಸ್ಥಾನಕ್ಕೆ ಹೋಗಿ ಸೇರಿದನೆಂದು ತಿಳಿದು ಜಡವಾದ ಮಣ್ಣಿನ ಪ್ರತಿಮೆಗಳನ್ನು ನೀರಿನಲ್ಲಿ ಬಿಡಬೇಕು. ಮೃತ್ತಿಕೆಯು ನೀರಿನಿಂದ ಹುಟ್ಟಿದ್ದೆಂದು ಅದ್ಭ್ಯಃ ಪೃಥವೀ" ಎಂಬ ಶೃತಿಯು ತಿಳಿಸಿದೆ. ಹೀಗೆ ಮಣ್ಣಿನಿಂದ ತಯಾರಾದ ಪ್ರತಿಮೆಯು ಪುನಃ ತನಗೆ ಕಾರಣವಾದ ಜಲದಲ್ಲಿ ಲಯ ಹೊಂದುವುದು ಉಚಿತವೇ ಆಗಿದೆ. ಇದರಿಂದ ಲಯಚಿಂತನೆಯನ್ನು ಅನುಸಂಧಾನ ಮಾಡಿದಂತಾಗಿ ಭಗವಂತನ ಸಂಹಾರಕರ್ತೃತ್ವವೂ ಚಿಂತಿಸಿದಂತಾಗುತ್ತದೆ. ಆದ್ದರಿಂದಲೇ ಪ್ರತಿಮೆಗಳನ್ನು ನೀರಿನಲ್ಲಿಯೇ ಬಿಡುವುದು. ನೀರಿನಲ್ಲಿ ಬಿಡುವಾಗ ಘಂಟಾದಿ ಸರ್ವವಾದ್ಯಗಳೊಂದಿಗೆ ನೀರಿನಲ್ಲಿ ಬಿಡುವುದು. ಸಕಲ ಮರ್ಯಾದೆಯಿಂದ ಆವಾಹಿಸಿದ ನಾವು ಅದೇ ಮರ್ಯಾದೆಗಳೊಂದಿಗೆ ಕಳುಹಿಸಿಕೊಡುವುದು ನ್ಯಾಯ ಪ್ರಾಪ್ತವಾಗಿದೆ.

---

ಈ ಚತುರ್ಥಿಯಂದು ಶುದ್ಧರಾಗಿ ಬೆಳ್ಳಿ ಅಥವಾ ಮಣ್ಣಿನ ಪ್ರತಿಮೆಯನ್ನಾಗಲೀ ಮಾಡಿಸಿ ಆ ಪ್ರತಿಮೆಯಲ್ಲಿ ಗಣಪತಿಯ ಅಂತರ್ಯಾಮಿಯಾದ ವಿಶ್ವನನ್ನು ಪೀಠಪೂಜಾ ಪೂರ್ವಕವಾಗಿ ಆವಾಹಿಸಿ ಪೂಜಿಸಿದ್ದರೆ ಸಮಸ್ತ ಸಂಕಷ್ಟಗಳಿಂದ ಮುಕ್ತರಾಗಬಹುದು. ಈ ವ್ರತಾಚರಣೆಯಿಂದ ಅಪವಾದಗಳನ್ನು ಪರಿಹರಿಸಿ ಕೊಳ್ಳಬಹುದು.

**ಚತುರ್ಥ್ಯಾಂ ಶುಕ್ಲಪಕ್ಷೇ ತು ಕಾರ್ಯಂ ಗಣೇಶ್ವರಂ ವ್ರತಮ್।**

**ಅಪವಾದಹರಂ ಚೈವ ಸರ್ವಸಂಕಷ್ಟನಾಶನಮ್॥**

ಈ ವ್ರತವನ್ನು ಯಾರು ಮೊದಲು ಆಚರಿಸಿದರು? ಈ ವ್ರತದ ಆಚರಣೆ ಯಿಂದ ಅಪವಾದವು ಹೇಗೆ ಪರಿಹಾರಹೊಂದುವುದು ಎಂದು ತಿಳಿಸಿ ಎಂದು ಶೌನಕರು ಕೇಳಿದರು.

**ಕೇನ ಚಾದೌ ಪುರಾ ಚೀರ್ಣಂ ಮರ್ತ್ಯಲೋಕೇ ಕಥಂ ಗತಮ್।**

ಸೂತಪುರಾಣಿಕರು ಹೀಗೆಂದರು "ಈ ವ್ರತವನ್ನು ಮೊದಲು ಶ್ರೀಕೃಷ್ಣ ಪರಮಾತ್ಮನೇ ಆಚರಿಸಿ ತನಗೆ ಬಂದ ಅಪವಾದವನ್ನು ಪರಿಹರಿಸಿಕೊಂಡಿರುವನು.

**ಚಕ್ರೇ ವ್ರತಂ ಜಗನ್ನಾಥೋ ವಾಸುದೇವಃ ಪ್ರತಾಪವಾನ್।**

**ಆದಿಷ್ಟೋ ನಾರದೇನೈವ ವೃಥಾಲಾಂಛನಮುಕ್ತಯೇ॥**

ಶೌನಕರು - ಜಗನ್ನಾಥನಾದ ಶ್ರೀಕೃಷ್ಣನಿಗೆ ಅಪವಾದ ಬಂದದ್ದಾದರೂ ಹೇಗೆ? ಎಂದು ಸೂತರು - ಭಾದ್ರಪದ ಚತುರ್ಥಿಯಂದು ಶ್ರೀಕೃಷ್ಣನು ಚಂದ್ರದರ್ಶನವನ್ನು ಮಾಡಿದ್ದರಿಂದ "ಮಣಿಗಳ್ಳ" ನೆಂಬ ಅಪವಾದಕ್ಕೆ ಗುರಿಯಾದನು. ಭಾದ್ರಪದ ಚತುರ್ಥಿಯಂದು ಯಾರು ಚಂದ್ರನನ್ನು ನೋಡುವರೋ ಅವರು ಮಿಥ್ಯಾಪವಾದ ದೂಷಿತರಾಗಲಿ ಎಂದು ಗಣಪತಿಯ ಶಾಪವಿರುತ್ತದೆ. ಆದ್ದರಿಂದ ಚಂದ್ರದರ್ಶನವು ನಿಷಿದ್ಧವಾಗಿದೆ.

**ಕನ್ಯಾದಿತ್ಯೇ ಚತುರ್ಥ್ಯಾಂ ತು ಶುಕ್ಲೇ ಚಂದ್ರಸ್ಯ ದರ್ಶನಂ।**

**ಮಿಥ್ಯಾದೂಷಣಂ ಕುರ್ಯಾತ್ ತಸ್ಮಾತ್ ಪಶ್ಯೇನ್ನ ತಂ ತದಾ॥**

ಶೌನಕರು - ಚಂದ್ರನಿಗೆ ಗಣಪತಿಯು ಶಾಪಕೊಡಲು ಕಾರಣವೇನೆಂಬುದನ್ನು ಸವಿಸ್ತಾರವಾಗಿ ತಿಳಿಸಿರಿ.

**ಕಿಮರ್ಥಂ ಗಣನಾಥೇನ ಶಪ್ತಶ್ಚಂದ್ರಃ ಸುಧಾಮಯಃ।**

**ಏತದಾಖ್ಯಾನಕಂ ಶ್ರೇಷ್ಠಂ ಯಥಾವದ್ ವಕ್ತುಮರ್ಹಸಿ॥**

ಒಂದೆ ರುದ್ರದೇವ ಹಾಗೂ ಬ್ರಹ್ಮದೇವನು ಗಣಪತಿಗೆ ಮಹಿಮಾ ಮೊದಲಾದ ಅಷ್ಟಸಿದ್ಧಿಗಳನ್ನೂ ಅನುಗ್ರಹಿಸಿದನು. ಹಾಗೆಯೇ ಬ್ರಹ್ಮದೇವನು ಲೋಕಶಿಕ್ಷಣಾರ್ಥವಾಗಿ ಸ್ತುತಿಸಿದನು.

ಬ್ರಹ್ಮದೇವನು ಮಾಡಿದ ಗಣಪತಿಯ ಸ್ತುತಿಯು ಮಿಶ್ರಸ್ತುತಿಯಾಗಿದ್ದು ಮುಖ್ಯವಾಗಿ ಗಣಪತಿಯ ಅಂತರ್ಯಾಮಿಯಾದ ವಿಶ್ವಂಭರನ ಸ್ತೋತ್ರವಾಗಿದೆ.

ಈ ಸ್ತೋತ್ರದಿಂದ ಸಂತುಷ್ಟನಾದ ಮಹಾಗಣಪತಿಯು ಬ್ರಹ್ಮದೇವನಿಗೆ ಸೃಷ್ಟಿ ಮಾಡುವಾಗ ಯಾವುದೇ ವಿಘ್ನವು ಉಂಟಾಗದಿರಲಿ ಎಂದು ಅನುಗ್ರಹಿಸಿದನು. ಇದರರ್ಥವು ಜನರು ಯಾವುದೇ ಕಾರ್ಯವನ್ನು ಪ್ರಾರಂಭಿಸುವಾಗ ಗಣಪತಿಯನ್ನು ಪೂಜಿಸಿದರೆ ನಿರ್ವಿಘ್ನತೆಯುಂಟಾಗುತ್ತದೆ ಎಂದು.

ಹೀಗೆ ವರವನ್ನು ನೀಡಿ ಸತ್ಯಲೋಕದಿಂದ ಚಂದ್ರಲೋಕಕ್ಕೆ ಬರುತ್ತಿರುವಾಗ ಎಡವಿಬಿದ್ದನು. ಇದನ್ನು ನೋಡಿ ಚಂದ್ರನು ಅಪಹಾಸ್ಯ ಮಾಡುತ್ತಾ ನಕ್ಕನು. ಚಂದ್ರನಿಗೆ ನಾನೇ ಅತಿ ಸುಂದರನೆಂಬ ಮದವೂ ಈ ಅಪಹಾಸಕ್ಕೆ ಕಾರಣವಾಗಿದ್ದಿತು.

**ಚಂದ್ರಲೋಕಂ ಸಮಾಸಾದ್ಯ ಸ್ಖಲಿತೋ ಗಣನಾಯಕಃ।**
**ಉಪಹಾಸಂ ಸಮಾಚಕ್ರೇ ಸೋಮೋ ರೂಪಮದಾನ್ವಿತಃ॥**

ಚಂದ್ರನ ಉಪಹಾಸದಿಂದ ಕೋಪಗೊಂಡ ಗಣಪತಿಯು ಹೀಗೆ ಶಾಪವಿತ್ತನು. "ನೀನು ಅತ್ಯಂತ ಸುಂದರನೆಂದು ಅಹಂಕಾರಿಯಾಗಿರುವೆ. ಆದ್ದರಿಂದ ಅಪಮಾನವನ್ನು ಮಾಡಿರುವೆ ಇದಕ್ಕಾಗಿ ನಿನ್ನನ್ನು ಶಪಿಸುವೆ. ಇಂದಿನಿಂದ ಜನರು ನಿನ್ನನ್ನು ನೋಡುವುದೇ ಬೇಡ ನೋಡಿದರೆ ಅವರಿಗೆ ಸುಳ್ಳು ಅಪವಾದ ಬರಲಿ" ಎಂದು.

**ಅದ್ಯಪ್ರಭೃತಿ ಲೋಕಸ್ತ್ವಾಂ ನ ಹಿ ಪಶ್ಯತಿ ಪಾಪಿನಂ।**
**ಯೇ ಪಶ್ಯಂತಿ ಪ್ರಮಾದೇನ ತ್ವಾಂ ನರಾ ಮೃಗಲಾಂಛನಂ॥**
**ಮಿಥ್ಯಾಭಿಶಾಪಸಂಯುಕ್ತಾಃ ಭವಿಷ್ಯಂತಿ ಹಿ ತೇ ಧ್ರುವಂ॥**

ಈ ಶಾಪದಿಂದ ಚಂದ್ರನು ದುಃಖಿಗೊಂಡನು, ನನ್ನ ಸೌಂದರ್ಯವನ್ನು ಜನರು ನೋಡದೆ ಇದ್ದರೆ ಆ ಸೌಂದರ್ಯವಿದ್ದೂ ವ್ಯರ್ಥವೆ ಸರಿ ಎಂದು ತಿಳಿದು ಗಣಪತಿಯನ್ನು ಶಾಪನಿವೃತ್ತಿಗಾಗಿ ಭಕ್ತಿಯಿಂದ ಸ್ತೋತ್ರ ಮಾಡಿದನು.

**ಪ್ರಸೀದ ದೇವೇಶ ಜಗನ್ನಿವಾಸ ಗಣೇಶ ಲಂಬೋದರ ವಕ್ರತುಂಡ।**
**ವಿರಿಂಚಿ ನಾರಾಯಣ ಪೂಜ್ಯಮಾನ ಕ್ಷಮಸ್ವ ಮೇ ಗರ್ವಕೃತಂ ಚ ಹಾಸ್ಯಂ॥**

ಇವೇ ಮೊದಲಾದ ಸ್ತೋತ್ರಗಳಿಂದ್ನ ಸಂತುಷ್ಟನಾದ ಗಣಪತಿಯು ಹೀಗೆ ಶಾಪವನ್ನು ಸಂಕೋಚಗೊಳಿಸಿದನು. ಭಾದ್ರಪದ ಮಾಸದ ಶುಕ್ಲಪಕ್ಷದ ಚತುರ್ಥಿಯಂದು ಮಾತ್ರ ಯಾರು ನಿನ್ನನ್ನು ನೋಡುವರು ಅವರಿಗೆ ಮಾತ್ರ ಮಿಥ್ಯಾಪವಾದ ಉಂಟಾಗುತ್ತದೆ. ಬೇರೆ ಸಮಯದಲ್ಲಿ ನಿನ್ನನ್ನು ನೋಡಲಡ್ಡಿಯಿಲ್ಲ" ಎಂದು.

**ಶುಕ್ಲಪಕ್ಷೇ ಚತುರ್ಥ್ಯಾಂ ತು ಯೇ ಪಶ್ಯಂತಿ ಸದೈವ ಹಿ।**
**ಮಿಥ್ಯಾಪವಾದಂ ಮಾಸಾಂತೇ ಪ್ರಾಪ್ಯಂತೇಽತ್ರ ನ ಸಂಶಯಃ॥**

ಅಷ್ಟೇ ಅಲ್ಲ, ಭಾದ್ರಪದ ಶುಕ್ಲ ದ್ವಿತೀಯಾ ದಿನದಂದು ಬಿದಿಗೆ ಚಂದ್ರನನ್ನು ನೋಡಿದ್ದು ಚತುರ್ಥಿ ಚಂದ್ರನ ದರ್ಶನ ಮಾಡಿದರೂ ಮಿಥ್ಯಾಪವಾದ ಗ್ರಸ್ತರಾಗುವುದಿಲ್ಲ.

**ಮಾಸಾದೌ ಪೂರ್ವಮೇವ ತ್ವಾಂ ದೃಷ್ಟ್ವಾ ಪಶ್ಯಂತಿ ಮಾನವಾಃ।**
**ಚತುರ್ಥ್ಯಾಂ ಶುಕ್ಲಪಕ್ಷೇ ತು ತೇಷಾಂ ದೋಷೋ ನ ವಿದ್ಯತೇ॥**

ಬಿದಿಗೆ ಚಂದ್ರನನ್ನು ನೋಡದೆ ಚತುರ್ಥಿಯಂದು ಚಂದ್ರದರ್ಶನವಾದರೂ ಮತ್ತೊಂದು ಪರಿಹಾರೋಪಾಯವಿದೆ. ಶ್ರೀ ಕೃಷ್ಣನು ಹೇಳಿರುವ ಸ್ಯಮಂತ ಕೋಪಾಖ್ಯಾನವನ್ನು ಶ್ರವಣ ಮಾಡಿದರೆ ಅಪವಾದವು ಬರುವುದಿಲ್ಲ.

ಸ್ಯಮಂತಕೋಪಾಖ್ಯಾನವು ಭಗವಂತನ ಮಹಿಮಾ ಪ್ರದರ್ಶನ ಪೂರ್ವಕ ಜಾಂಬವತೀ ಹಾಗೂ ಸತ್ಯಭಾಮಾ ದೇವಿಯರ ಮಂಗಳ ವಿವಾಹವನ್ನು ವರ್ಣಿಸುವುದರಿಂದ ಆ ದೋಷವು ಪರಿಹೃತವಾಗುವುದು.

ಸ್ಯಮಂತಕೋಪಾಖ್ಯಾನವನ್ನು ಶ್ರವಣಮಾಡಲು ಅನುಕೂಲವಿಲ್ಲವಾದಾಗ ಭಗವಂತನಿಂದ ಹೇಳಲ್ಪಟ್ಟ ಸ್ಯಮಂತಕೋಪಾಖ್ಯಾನ ಸಂಗ್ರಹಾತ್ಮಕವಾದ ಈ ಕೆಳಗಿನ ಶ್ಲೋಕವನ್ನಾದರೂ ಜಪಿಸಬೇಕು.

**ತದ್ದೋಷಶಾಂತಯೇ ಜಾಪ್ಯಂ ವಿಷ್ಣುನೋಕ್ತಂ ಸ್ಯಮಂತಕಂ।**
**ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ।**
**ಸುಕುಮಾರಕ ಮಾ ರೋದೀಃ ತವ ಹ್ಯೇಷಃ ಸ್ಯಮಂತಕಃ॥**

## ಸ್ಯಮಂತಕೋಪಾಖ್ಯಾನಂ

ನಾರಾಯಣನ ಪರಮ ಭಕ್ತನಾದ ಸತ್ರಾಜಿತ್‌ರಾಜನು ಸೂರ್ಯ ಮಂಡಲಾಂತರ್ಗತನಾದ ಸೂರ್ಯನಾರಾಯಣನನ್ನು ಒಲಿಸಿ ಅವನಿಂದ

ಸ್ಯಮಂತಕಮಣಿಯನ್ನು ಪಡೆದನು. ಸತ್ರಾಜಿತ್‌ನು ವಿಷ್ಣುಭಕ್ತನಾಗಿದ್ದರೂ ಲೋಭಿಯಾಗಿದ್ದನು ವಿಷ್ಣುಭಕ್ತನಾಗಿದ್ದಾರೂ ಲೋಭಿಯಾಗಿದ್ದನು. ಇದನ್ನು ಲೋಕಕ್ಕೆ ತೋರಿಸಲೆಂದೇ ಆ ಮಣಿಯನ್ನು ತನಗೆ ಬೇಕೆಂದು ಕೇಳಿದನು. ಭಕ್ತರ ಚಿಂತಿತ ಮನೋಭೀಷ್ಟಗಳನ್ನು ಸುರಿಸುವ ಲಕ್ಷ್ಮೀಪತಿಗೆ ಈ ಜಡಮಣಿಯಿಂದಾಗ ಬೇಕಾದ್ದೇನೂ ಇಲ್ಲವಷ್ಟೆ. ಆದರೆ ಸತ್ರಾಜಿತನು ಲೋಭದಿಂದ ಕೊಡಲಿಲ್ಲ.

ಸತ್ರಾಜಿತನಿಗೆ ಪ್ರಸೇನನೆಂಬ ಸೋದರನಿದ್ದನು. ಅವನು ಆ ಮಣಿಯನ್ನು ಅಶುಚಿಯಿಂದ ಧರಿಸಿದ್ದನು. ಇದರ ಫಲವಾಗಿ ಸಿಂಹದ ಆಕ್ರಮಣಕ್ಕೆ ಬಲಿಯಾದನು. ಸಿಂಹವು ಮಣಿಯನ್ನು ಬಾಯಲ್ಲಿ ಕಚ್ಚಿಕೊಂಡು ಹೋಗುತ್ತಿರುವಾಗಿ ಯಮಾಂಶನಾದ ಜಾಂಬವಂತನು ಸಿಂಹವನ್ನು ಕೊಂದು ಆ ಮಣಿಯನ್ನು ತನ್ನ ಮಗಳ ಉಯ್ಯಾಲೆಯಲ್ಲಿ ಕಟ್ಟಿದನು. (ಮಗುವಿನ ತೊಟ್ಟಿಲಿಗೆ ಕಟ್ಟಿದನೆಂದು ಪುರಾಣಗಳು ತಿಳಿಸಿವೆ.)

ಸತ್ರಾಜಿತನು ಶ್ರೀ ಕೃಷ್ಣನೇ ತನ್ನ ತಮ್ಮನನ್ನು ಕೊಂದು ಮಣಿಯನ್ನು ಅಪಹರಿಸಿರಬೇಕೆಂದು ಪ್ರಚಾರಮಾಡಿದನು.

**ಲೋಕೇ ಪ್ರಖ್ಯಾಪಯಾಮಾಸ ದೋಷೀ ಕೃಷ್ಣ ಇತಿ ಸ್ಮ ಹ।**
**ಹತ್ವಾ ಮಮಾನುಜಂ ಹ್ಯೇಷಃ ಹೃತವಾನ್ ಮಣಿಮುತ್ತಮಂ॥**

ಶ್ರೀ ಕೃಷ್ಣನಿಗೆ ಹೀಗೆ ಮಿಥ್ಯಾಪವಾದ ಬರಲು ಅವನು ಭಾದ್ರ ಚತುರ್ಥಿಯಂದು ಚಂದ್ರನನ್ನು ನೋಡಿದ್ದೆ ಆಗಿದೆ.

**ಮಾಸಿ ಭಾದ್ರಪದೇ ಶುಕ್ಲ ಚತುರ್ಥ್ಯಾಂ ಶಾಪಸಮ್ಮತಃ।**
**ಗಣನಾಥಸ್ಯ ವೈ ಯಸ್ಮಾತ್ ಶಶಿನಂ ದೃಷ್ಟವಾನಹಮ್॥.**

ಸರ್ವದೋಷದೂರನಾದ ನಿತ್ಯವೂ ಶಶಿಸೂರ್ಯನೇತ್ರನಾದವನೂ, ಸರ್ವತ್ರ ವ್ಯಾಪ್ತನೂ ಆಗಿ ಸಮಸ್ತವನ್ನು ಸರ್ವದಾ ನಿರೀಕ್ಷಿಸುತ್ತಿರುವ ಭಗವಂತನಿಗೆ ಶಶಿದರ್ಶನದಿಂದಾಗುವ ದೋಷವಾದವುದೂ ಇರುವುದಿಲ್ಲ. ಆದರೂ ತನ್ನ ಪರಮಭಕ್ತನಾದ ಗಣಪತಿಯ ಮಾತನ್ನು ಸತ್ಯವನ್ನಾಗಿಸಲು ತನ್ನನ್ನೇ ದೃಷ್ಟಾಂತವನ್ನಾಗಿಸಿಕೊಂಡು ಈ ರೀತಿ ಲೋಕಶಿಕ್ಷಣಕ್ಕಾಗಿ ನಾಟಕವಾಡಿದನು.

ಬಂದ ಅಪವಾದವನ್ನು ಹಾಗೆ ಉಪೇಕ್ಷಿಸಬಾರದು ಅದನ್ನು ಪರಿಹರಿಸಿಕೊಳ್ಳಬೇಕೆಂದು ಶಿಕ್ಷಣ ನೀಡಲು ಯಾದವರಿಂದ ಕೂಡಿಕೊಂಡು ತಾನೇ ತೆರಳಿದನು.

**ತದ್ದೋಷಂ ಮಾರ್ಜಿತುಂ ಕೃಷ್ಣಃ ಸರ್ವಾನಾಹೂಯ ಯಾದವಾನ್।**
**ಮೃಗಯಾಮಾಸ ತತ್ಸರ್ವಂ ವನಾಂತರಗತೈಃ ಸಹ॥**

ಕಾಡಿನಲ್ಲಿ ಸಿಂಹದಿಂದ ಮೃತನಾದ ಪ್ರಸೇನನನ್ನೂ ಮುಂದೆ ಕರಡಿಯಿಂದ ಮೃತವಾದ ಸಿಂಹವನ್ನು ನೋಡಿ ಕರಡಿಯ ಹೆಜ್ಜೆಯ ಮೂಲಕ ಗುಹೆಯನ್ನು ಪ್ರವೇಶಿಸಿದನು.

ಯಾದವರನ್ನು ಗುಹೆಯ ಹೊರಗೆ ನಿಲ್ಲಿಸಿ ತಾನೊಬ್ಬನೆ ಗುಹಾಪ್ರವೇಶ ಮಾಡಿದನು. ಗುಹೆಯಲ್ಲಿ ಧಾತ್ರಿಯು "ಕುಮಾರನೇ" ಸಿಂಹವು ಪ್ರಸೇನನನ್ನು ಕೊಂದಿತು ಸಿಂಹವನ್ನು ಜಾಂಬವಂತನು ಕೊಂದು ತಂದಿರುವ ಈ ಸ್ಯಮಂತಕಮಣಿಯು ನಿನಗೆ ಎಂದು ಹಾಡುತ್ತಿದ್ದಳು.

ಗುಹೆಯನ್ನು ಪ್ರವೇಶ ಮಾಡಿದ ಶ್ರೀಕೃಷ್ಣನನ್ನು ನೋಡಿದ ದಾದಿಯು ಭಯಗೊಂಡು ಕೂಗಿಕೊಂಡಳು. ಜಾಂಬವಂತನು ಎಚ್ಚೆತ್ತು ಶ್ರೀಕೃಷ್ಣನ ಜೊತೆಗೆ ೨೮ ದಿನಗಳ ಕಾಲ ಯುದ್ಧ ಮಾಡಿ ಬಲಗುಂದಿದನು. ಭಗವಂತನಾದರೂ ತನ್ನ ಭಕ್ತನೆಂದು ಮೆಲ್ಲನೆ ಯುದ್ಧಮಾಡಿದನು.

ಭಗವಂತನ ಮುಷ್ಟಿಪ್ರಹಾರಗಳಿಂದ ನಜ್ಜುಗುಜ್ಜಾದ ಜಾಂಬವಂತನು ರಾಮನನ್ನೆ ಮೊರೆ ಹೊಕ್ಕನು. ಶ್ರೀರಾಮನ ಸ್ಮರಣೆ ಬರುತ್ತಿರಲು ಶ್ರೀಕೃಷ್ಣನಲ್ಲಿಯೇ ಶ್ರೀರಾಮ ಮೂರ್ತಿಯನ್ನು ಕಂಡನು. ಕ್ಷಮೆಯನ್ನು ಬೇಡಿ ಪಾಪದ ಪ್ರಾಯಶ್ಚಿತ್ತಕ್ಕಾಗಿ ತನ್ನ ಮಗಳಾದ ಜಾಂಬವತಿಯನ್ನು ಹಾಗು ಸ್ಯಮಂತಕವನ್ನು ಕೊಟ್ಟು ಕಳಿಸಿದನು.

**ಇತ್ಯುಕ್ತಃ ಸ್ವಾಂ ದುಹಿತರಂ ಕನ್ಯಾಂ ಜಾಂಬವತೀಂ ಮುದಾ।**
**ಅರ್ಹಣಾರ್ಥಂ ಸಹಮಣಿಂ ಕೃಷ್ಣಾಯೋಪಜಹಾರ ಸಃ॥**

ನಂತರ ಯಾದವರ ಸಭೆಯಲ್ಲಿ ಸತ್ರಾಜಿತನಿಗೆ ಸಕಲವೃತ್ತಾಂತವನ್ನೂ ತಿಳಿಸಿ ಮಣಿಯನ್ನು ಕೊಟ್ಟನು.

**ಸತ್ರಾಜಿತಂ ಸಮಾಹೂಯ ಸಭಾಯಾಂ ರಾಜಸನ್ನಿಧೌ।**
**ಪ್ರಾಪ್ತಿಂ ಚಾಖ್ಯಾಯ ಭಗವಾನ್ ಮಣಿಂ ತಸ್ಮೈ ನ್ಯವೇದಯತ್॥**

ವೃಥಾ ಅಪವಾದವನ್ನು ಶ್ರೀಕೃಷ್ಣನ ಮೇಲೆ ಮಾಡಿದ್ದರಿಂದ ನೊಂದ ಸತ್ರಾಜಿತನು ತನ್ನ ಪಾಪವನ್ನು ಕಳೆಯುವ ಸಲುವಾಗಿ ತನ್ನ ಪುತ್ರಿಯಾದ ಸತ್ಯಭಾಮೆಯನ್ನು ಮದುವೆ ಮಾಡಿದನು.

**ದಾಸ್ಯೇ ದುಹಿತರಂ ತಸ್ಮೈ ಸ್ತ್ರೀರತ್ನಂ ರತ್ನಮೇವ ಚ।**
**ಉಪಾಯೋಽಯಂ ಸಮೀಚೀನಃ ತಸ್ಯ ಶಾಂತಿರ್ಭವಿಷ್ಯತಿ॥**
**ಏವಂ ವ್ಯವಸಿತೋ ಬುದ್ಧ್ಯಾ ಕೃಷ್ಣಾಯೋಪಜಹಾರ ತಾಮ್।**

ಭಗವಂತನು ಮಣಿಯನ್ನು ಸ್ವೀಕರಿಸದೆ ಈ ಮಣಿಯು ನಿನ್ನಲ್ಲಿಯೇ ಇರಲಿ ಎಂದನು. ಹೀಗೆ ಅಪವಾದವನ್ನು ಪರಿಹರಿಸಿಕೊಂಡು ಶ್ರೀಕೃಷ್ಣನು ನಾನು ಚತುರ್ಥಿಯಂದು ಚಂದ್ರದರ್ಶನದಿಂದ ಇಂಥಹ ಅಪವಾದವುಂಟಾಯಿತು ಎಂದನು.

## ಗಣಪತಿಯ ತತ್ವ

ಗಣಪತಿಯು ಜಾಗ್ರದವಸ್ಥಾಪ್ರೇರಕನಾದ ವಿಶ್ವನ ಹಾಗೂ ತೈಜಸನ ಉಪಾಸನೆಯಿಂದ ಗಜಮುಖವನ್ನು ಹೊಂದಿರುವನು. ದೇವತೆಗಳ ಭಕ್ತಿಜ್ಞಾನಾದಿಗಳ ಹುಟ್ಟುವಿಕೆ ಹಾಗೂ ಭೋಗಿಸುವ ರೀತಿ ಲೋಕವಿಲಕ್ಷಣಗಳಾದವು. ಗಣಪತಿಯ ಉಪಾಸ್ಯಮೂರ್ತಿಯಾದ ವಿಶ್ವಂಭರರೂಪಿಭಗವಂತನಿಗೆ ಹತ್ತೊಂಭತ್ತು ಮುಖಗಳಿದ್ದು ವಿಶ್ವದ ಮಧ್ಯದ ಮುಖವು ಗಜಾಕಾರವಾಗಿದೆ. ಇದರ ಉಪಾಸನೆಯನ್ನು ಮಾಡಿ ಗಣಪತಿಯು ಆನೆಯ ಮುಖವನ್ನು ಹೊಂದಿರುವನು. ಈ ಯಥಾರ್ಥವಿಷಯವನ್ನು ಪುರಾಣಗಳು ಕಥೆಯ ರೂಪದಲ್ಲಿ ಹೆಣೆದಿವೆ.

ಪಾರ್ವತಿಯ ಮಣ್ಣಿನಿಂದ ಹುಟ್ಟಿದನೆಂದು ಶಿವನು ತ್ರಿಶೂಲದಿಂದ ತಲೆ ತರಿದು ಆನೆಯ ಮುಖವನ್ನು ಜೋಡಿಸಿದನೆಂದು ಇತ್ಯಾದಿ ಬಾಲಿಶ ಕಥೆಗಳಂತೆ ತೋರುವ ವಿಷಯಗಳನ್ನು ಆಚಾರ್ಯರ ಮಾರ್ಗದರ್ಶನದ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಬೇಕು.

ಪಾರ್ವತಿಯ ಮೈ ಕೊಳೆಯಿಂದ ಗಣಪತಿಯ ಜನ್ಮವೆಂದರೆ ೧೮ನೇ ಕಕ್ಷೆಯಲ್ಲಿರುವ ವಿಷ್ವಕ್ಸೇನ, ಅಶ್ವಿನೀದೇವತೆ, ಗಣಪತಿ ತತ್ವಗಳನ್ನು ಮೀರಿ ನಿಂತಿರುವ ಬುದ್ಧಿ ತತ್ವಾಭಿಮಾನಿಯಾದ ಉಮೆಯು ಈ ತತ್ವಗಳ ಜನಕಳೂ ಹಾಗೂ ನಿಯಾಮಕಳೂ ಎಂದು ತಿಳಿಯಬೇಕು.

ರುದ್ರನು ಗಣಪತಿಯನ್ನು ಸಂಹರಿಸಿ ಬದುಕಿಸಿದನು ಎಂಬ ಕಥಾಭಾಗವನ್ನು ಬುದ್ಧಿ ತತ್ವಾಭಿಮಾನಿಯಾದ ಉಮೆಯನ್ನು ನಿಯಮಿಸುವವನು ಅಹಂಕಾರ ತತ್ವಾಭಿಮಾನಿಯಾದ ರುದ್ರನೆಂದು ಮತ್ತು ಜಗತ್ಸಂಹಾರ ಕಾರ್ಯದಲ್ಲಿ ರುದ್ರದೇವನು ಪ್ರಧಾನಪಾತ್ರವಹಿಸುವನೆಂದು ತಿಳಿಯಬೇಕು.

ರುದ್ರದೇವನು ಕೇವಲ ಸಂಹಾರಕರ್ತನಲ್ಲ, ಸೃಷ್ಟಿಸಲೂ ಸಮರ್ಥ ಎಂದು ಗಣಪತಿಯನ್ನು ಪುನಃ ಬದುಕಿಸಿದ ವಿಷಯದಿಂದ ತಿಳಿಯಬೇಕು.

ಭಕ್ತವತ್ಸಲನಾದ ಭಗವಂತನು ಭಕ್ತರಿಗಾಗಿ ಚಿಕ್ಕವರನ್ನೂ ಪೂಜಿಸುವನು ಎಂದು ಸ್ಯಮಂತಕೋಪಾಖ್ಯಾನದಿಂದ ತಿಳಿಯಬೇಕು.

ಗಣಪತಿಯು ಆಕಾಶಾಭಿಮಾನಿಯಾಗಿದ್ದು ಹದಿನಂಟನೇ ಕಕ್ಷೆಯಲ್ಲಿರುವ ವಿಷ್ವಕ್ಸೇನಾದಿಗಳಿಗೆ ಸಮನಾಗಿದ್ದು ಸೋಮಪಾನಾರ್ಹವಾಗಿರುವನು.

ಇಂಥಹ ಗಣಪತ್ಯಂತರ್ಗತನಾದ ವಿಶ್ವಂಭರನಾದ ಭಗವಂತನನ್ನು ಮೃತ್ತಿಕಾ ನಿರ್ಮಿತ ಪ್ರತಿಮೆಯಲ್ಲಿ ಆವಾಹಿಸಿ ಪೂಜಿಸಿದರೆ ವಿಶ್ವಂಭರನು ಸಮಸ್ತ ವಿಘ್ನಗಳನ್ನು ಪರಿಹರಿಸಿ ಇಷ್ಟಾರ್ಥಗಳನ್ನು ಕರುಣಿಸುವನು.

*********

# 2. ಸ್ವರ್ಣಗೌರೀ ವ್ರತಮ್«

ಆಚಮ್ಯ - ( ಎರಡು ಬಾರಿ) ಪ್ರಾಣಾನಾಯಮ್ಯ ಶುಭೇ ಶೋಭನೇ ಮುಹೂರ್ತೇ, ಆದ್ಯ ಬ್ರಹ್ಮಣಃ, ದ್ವಿತೀಯ ಪರಾರ್ಧೇ, ಶ್ರೀವೈವಸ್ವತ ಮನ್ವಂತರೇ, ಕಲಿಯುಗೇ, ಪ್ರಥಮಪಾದೇ, ಜಂಬೂದ್ವೀಪೇ ಭರತವರ್ಷೇ, ಭರತಖಂಡೇ, ದಂಡಕಾರಣ್ಯೇ ದೇಶೇ ಗೋದಾವರ್ಯಾಃ ದಕ್ಷಿಣೇ ತೀರೇ, ಶಾಲಿವಾಹನ ಶಕೆ, ಬೌದ್ಧಾವತಾರೇ, ರಾಮಕ್ಷೇತ್ರೇ (ಪರಶುರಾಮಕ್ಷೇತ್ರೇ) ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ಶ್ರೀ ಅಮುಕನಾಮ ಸಂವತ್ಸರೇ- ದಕ್ಷಿಣಾಯನೇ ವರ್ಷಋತೌ, ಭಾದ್ರಪದ ಮಾಸೇ - ಶುಕ್ಲಪಕ್ಷೇ ತೃತೀಯಾ ಯಾಂ - ಅಮುಕವಾಸರಯುಕ್ತಾಯಾಂ ಶುಭತಿಥೌ।

ಅಸ್ಮಾಕಂ ಸಕುಟುಂಬಾನಾಂ ಕ್ಷೇಮ - ಸ್ಥೈರ್ಯ ವಿಜಯಾಯುರಾರೋಗ್ಯ ಐಶ್ವರ್ಯಾಭಿವೃದ್ಧ್ಯರ್ಥಂ, ಸತ್ಸಂತಾನ ಚಿರಕಾಲ ಸೌಮಾಂಗಲ್ಯ ಸಿದ್ಧಿದ್ವಾರಾ ಚಿಂತಿತ ಮನೋಭೀಷ್ಟ ಸಿದ್ಧ್ಯರ್ಥಂ, ಪುತ್ರಪೌತ್ರಾಭಿವೃದ್ಧ್ಯರ್ಥಂ ಜ್ಞಾನ ಭಕ್ತಿ ವೈರಾಗ್ಯಾದಿ ಸಿದ್ಧ್ಯರ್ಥಂ ಸ್ವರ್ಣಗೌರ್ಯಂತರ್ಗತ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಜಯಾಪತಿ ಸಂಕರ್ಷಣ ಪ್ರೇರಣಯಾ ಶ್ರೀ ಸಂಕರ್ಷಣ ಪ್ರೀತ್ಯರ್ಥಂ ಸ್ವರ್ಣಗೌರ್ಯಾಃ, ತದಂತರ್ಗತ ಜಯಾಪತಿ ಶ್ರೀ ಸಂಕರ್ಷಣಸ್ಯ ಚ ಧ್ಯಾನಾವಾಹಾನಾದಿ ಷೋಡಶೋಪಚಾರ ಪೂಜಾಂ ಕರಿಷ್ಯಮಾಣಃ ತದಾದೌ ನಿರ್ವಿಘ್ನತಾಸಿದ್ಧ್ಯರ್ಥಂ ಗಣಪತ್ಯಂತರ್ಗತ ಶ್ರೀಭಾ - ಮು - ಪ್ರಾಣಾಂತರ್ಗತ ಶ್ರೀ ವಿಶ್ವಂಭರಸ್ಯ ಧ್ಯಾನಾವಾಹನಾದಿಷೋಡ ಶೋಪಚಾರಪೂಜಾಂ ಕರಿಷ್ಯೇ।

ಆದೌ ಕಲಶಪೂಜಾಂ, ಶಂಖ ಪೂಜಾಂ ಚ ಕೃತ್ವಾ ಪೂಜಾದ್ರವ್ಯಾಣಿ, ಪ್ರತಿಮಾಂ, ಆತ್ಮಾನಂ ಚ ಶಂಖತೋಯೇನ ಪ್ರೋಕ್ಷ್ಯ ಯಮುನಾ ಪೂಜಾಂ☐ ಕುರ್ಯಾತ್। 438 →

« ಗೌರೀದೇವಿಯ ವ್ರತವನ್ನು ಹದಿನಾರು ವರ್ಷಗಳ ಕಾಲ ಆಚರಿಸಬೇಕು. ಹದಿನಾರು ಗ್ರಂಥಿಗಳುಳ್ಳ ದಾರವನ್ನು ಕಟ್ಟಿಕೊಳ್ಳಬೇಕು. ಹದಿನಾರು ಬಾಗಿಣವನ್ನು ದಾನ ಮಾಡಬೇಕು. ಈ ಹದಿನಾರು ಸಂಖ್ಯೆಗೆ "ಸುವರ್ಣ" ಎಂದು ಹೆಸರು (ಸು+ವ+ರ್ಣ=7+4+5)

☐ ಯಮುನಾ ಪೂಜೆಯೆಂದರೆ ಗಂಗಾದಿ ಸಕಲ ನದ್ಯಭಿಮಾನಿ ದೇವತೆಗಳ ಪೂಜೆ ಹೊರತು ಕೇವಲ ಯಮುನಾ ಪೂಜೆಯಲ್ಲ. ಹಾಗೆ ಮಾಡಲು ಕಾರಣವೂ ಇಲ್ಲ. ಹಾಗಿದ್ದರೆ ತಾರತಮ್ಯಾನುಸಾರವಾಗಿ ದ್ವಿತೀಯ ಕಕ್ಷ್ಯೆಯಲ್ಲಿ ಬರುವ ಗೋದಾವರಿಯನ್ನು ಬಿಟ್ಟದ್ದು ತಪ್ಪಾದೀತು. ನದ್ಯಭಿಮಾನಿ ದೇವತೆಗಳ ಪತಿಯಾದ ವರುಣಾಂತರ್ಯಾಮಿಯಾದ ಸೇತು ಮಾಧವ ಎಂದು ಮಾಧವನ ಪೂಜೆಯನ್ನು ಮಾಡುವುದೇ [illegible]ವವಾದ ಪೂಜೆ.

## ಗಣಪತಿಪೂಜಾ

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾ ಮುಪವಶ್ರವಸ್ತಮಂ। ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂತಿಭಿಃ ಸೀದ ಸಾಧನಮ್॥

ಓಂ ಭೂಃ ಗಣಪತ್ಯಂತರ್ಗತಂ ಶ್ರೀ ವಿಶ್ವಂಭರಂ ಆವಾಹಯಾಮಿ।
ಓಂ ಭುವಃ ಗಣಪತ್ಯಂತರ್ಗತಂ ಶ್ರೀ ವಿಶ್ವಂಭರಂ ಆವಾಹಯಾಮಿ।
ಓಂ ಸ್ವಃ ಗಣಪತ್ಯಂತರ್ಗತಂ ಶ್ರೀ ವಿಶ್ವಂಭರಂ ಆವಾಹಯಾಮಿ।
ಓಂ ಭೂರ್ಭುವಸ್ಸ್ವಃ ಗಣಪತ್ಯಂತರ್ಗತಂ ಶ್ರೀ ವಿಶ್ವಂಭರಂ ಆವಾಹಯಾಮಿ।
ಸ್ಥಾಪಯಾಮಿ। ಪೂಜಯಾಮಿ। ನಮಸ್ಕರೋಮಿ।

ಆವಾಹಿತ ಗಣಪತ್ಯಂತರ್ಗತ ಶ್ರೀ ವಿಶ್ವಂಭರಾಯ ನಮಃ। ಧ್ಯಾಯಾಮಿ। ಆವಾಹಯಾಮಿ। ಆಸನಂ। ಪಾದಯೋಃ ಪಾದ್ಯಂ ಸುಪಾದ್ಯಂ। ಹಸ್ತಯೋಃ ಅರ್ಘ್ಯಂ। ಮುಖೇ ಆಚಮನೀಯಂ। ಶುದ್ಧೋದಕ ಸ್ನಾನಂ। ಪಂಚಾಮೃತಂ। ಪುನಃ ಶುದ್ಧೋದಕಸ್ನಾನಂ। ವಸ್ತ್ರಯುಗ್ಮಂ। ಯಜ್ಞೋಪವೀತಂ। ಪುಷ್ಪೈಃ ಪೂಜಯಾಮಿ।

ಓಂ ಸುಮುಖಾಯನಮಃ। ಏಕದಂತಾಯ ನಮಃ।
ಓಂ ಕಪಿಲಾಯ ನಮಃ। ಗಜಕರ್ಣಕಾಯ ನಮಃ।
ಓಂ ಲಂಬೋದರಾಯ ನಮಃ। ವಿಕಟಾಯ ನಮಃ।
ಓಂ ಫಾಲಚಂದ್ರಾಯ ನಮಃ। ಗಜಾನನಾಯ ನಮಃ।
ಓಂ ಗಣಪತ್ಯಂತರ್ಗತ ಶ್ರೀ ವಿಶ್ವಂಭರಾಯ ನಮಃ। ಪುಷ್ಪೈಃ ಪೂಜಾಯಾಮಿ।

ಧೂಪಮಾಘ್ರಾಪಯಾಮಿ। ದೀಪಂ ದರ್ಶಯಾಮಿ। ನೈವೇದ್ಯಂ ಸಮರ್ಪಯಾಮಿ। ಓಂ ಭೂರ್ಭುವಸ್ಸ್ವಃ। ಸತ್ಯಂ ತ್ವರ್ತೇನ ಪರಿಷಿಂಚಾಮಿ। ಅಮೃತೋಪಸ್ತರಣಮಸಿ ಸ್ವಾಹಾ। ಓಂ ಪ್ರಾಣಾಯ ಸ್ವಾಹಾ। ಓಂ ಅಪಾನಾಯ ಸ್ವಾಹಾ। ಓಂ ವ್ಯಾನಾಯ ಸ್ವಾಹಾ। ಓಂ ಉದಾನಾಯ ಸ್ವಾಹಾ। ಓಂ ಸಮಾನಾಯ ಸ್ವಾಹಾ। ಓಂ ಬ್ರಹ್ಮಣೇ ನಮಃ। ಶ್ರೀ ಗಣಪತ್ಯಂತರ್ಗತ ವಿಶ್ವಂಭರಾಯ ನಮಃ। ಗುಡೋಪಹಾರ ನೈವೇದ್ಯಂ

ಸಮರ್ಪಯಾಮಿ। ತಾಂಬೂಲಂ। ಸುವರ್ಣ ಪುಷ್ಪದಕ್ಷಿಣಾಂ ಸ। ಮಂಗಳ ನೀರಾಜನಂ ಸಮರ್ಪಯಾಮಿ। ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ।

ವಕ್ರತುಂಡ ಮಹಾಕಾಯ ಸೂರ್ಯಕೋಟಿ ಸಮಪ್ರಭ।
ಅವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ॥

ಪ್ರಾರ್ಥನಾಂ ಸಮರ್ಪಯಾಮಿ।

ಶ್ರೀ ಮಹಾಗಣಪತ್ಯಂತರ್ಗತ ವಿಶ್ವಂಭರಸ್ಯ ಅನುಗ್ರಹಸಿದ್ಧಿರಸ್ತು।
ಅನೇನ ಗಣಪತಿಪೂಜನೇನ ಶ್ರೀ ಮಹಾಗಣಪತ್ಯಂತರ್ಗತ ವಿಶ್ವಂಭರಃ ಪ್ರೀಯತಾಮ್।

---

## □ನೂತನದೋರ ಸ್ಥಾಪನಮ್

ದೇವ್ಯಾಸ್ತು ಪುರತಃ ಸಮ್ಯಕ್ ನವಸೂತ್ರಂ ಪ್ರಕಲ್ಪಯೇ।
ಗ್ರಂಥಿಷೋಡಶಕೋಪೇತಂ ಕುಂಕುಮೇನ ವಿರಾಜಿತಂ॥

## ಸ್ವರ್ಣಗೌರ್ಯಾವಾಹನಮ್

ಓಂ ಗೌರೀರ್ಮಿಮಾಯ ಸಲಿಲಾನಿ ತಕ್ಷತ್ಯೇಕಪದಿ ದ್ವಿಪದೀ ಸಾ ಚತುಷ್ಪದೀ।
ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಪರಮೇ ವ್ಯೋಮನ್॥

ಓಂ ಭೂಃ ಸ್ವರ್ಣಗೌರ್ಯಂತರ್ಗತ ಶ್ರೀ ಭಾರತೀ ರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಜಯಾಪತಿ ಶ್ರೀ ಸಂಕರ್ಷಣಮಾವಾಹಯಾಮಿ। ಓಂ ಭುವಃ ಸ್ವರ್ಣಗೌರ್ಯಂತರ್ಗತ ಶ್ರೀ ಜಯಾಪತಿ ಶ್ರೀ ಸಂಕರ್ಷಣಂ ಆವಾಹಯಾಮಿ।
ಓಂ ಸ್ವಃ ಶ್ರೀ ಜಯಾಪತಿ ಶ್ರೀ ಸಂಕರ್ಷಣಂ ಆವಾಹಯಾಮಿ। ಓಂ ಭೂರ್ಭುವಸ್ಸ್ವಃ ಶ್ರೀ ಜಯಾಪತಿ ಶ್ರೀ ಸಂಕರ್ಷಣಂ ಆವಾಹಯಾಮಿ। ಸ್ಥಾಪಯಾಮಿ। ಪೂಜಯಾಮಿ। ನಮಸ್ಕರೋಮಿ।

---

□ಗೌರೀಪೂಜೆಯನ್ನು ಮಾಡುವ ಮೊದಲು ಮಂಟಪದಲ್ಲಿ ಸೇರು ಅಕ್ಕಿಯನ್ನು ಹರಡಿ ಗೌರಿಯ ಮಣ್ಣಿನ ಅಥವಾ ಬೆಳ್ಳಿಯ ಪ್ರತಿಮೆಯನ್ನಿಟ್ಟು ಕಲಶವನ್ನು ಸ್ಥಾಪಿಸಿ ಆ ಕಲಶದ ಬಲಭಾಗದಲ್ಲಿ ತಾಂಬೂಲಸಹಿತ ಹದಿನಾರು ಗಂಟನ್ನು ಹಾಕಿರುವ ದಾರವನ್ನು ಕುಂಕುಮದಿಂದ ಅಲಂಕರಿಸಿ ದೇವಿಯ ಮುಂದಿಡಬೇಕು.

ಓಂ ನಮೋ ನಾರಾಯಣಾಯ ಓಂ। ಓಂ ಶ್ರೀ ದುರ್ಗಾಯೈ ನಮಃ ಓಂ। ಓಂ ನಮಃ ಶಿವಾಯೈ ಓಂ। ⍝ಆವಾಹಿತೋ ಭವ। ಸ್ಥಾಪಿತೋ ಭವ। ಸನ್ನಿಹಿತೋಽಭವ। ಸನ್ನಿರುದ್ಧೋಽಭವ। ಅವಗುಂಠಿತೋಽಭವ। ಸುಪ್ರಸನ್ನೋಽಭವ। ವರದೋಽಭವ। ಪ್ರಸೀದ ಪ್ರಸೀದ।
(ಆವಾಹನಾದಿ ಸಪ್ತ ಮುದ್ರಾಃ ಪ್ರದರ್ಶಯೇತ್)

ಏಹ್ಯೇಹಿ ಶ್ರೀ ಸ್ವರ್ಣಗೌರ್ಯಂತರ್ಗತ ಶ್ರೀ ಜಯಾಪತಿ ಸಂಕರ್ಷಣಂ ಪೀಠಸ್ಥಿತ ಮೃಣ್ಮಯ ಪ್ರತಿಮಾಂತಸ್ಥಿತ ತೇಜಸ್ಸಾರಮಯ ಭೂತ ಪ್ರತಿಮಾಂತಸ್ಥಿತ ಶ್ರೀ ಮುಖ್ಯ ಪ್ರಾಣ ಪ್ರತಿಮಾಮಧ್ಯೇ ದುರ್ಗಯಾ ಸಹ ಕ್ಷೀರನೀರವದಾಸೀನ ಸ್ವಪ್ರತಿಮಾಯಾಂ ಆವಾಹಯಾಮಿ।
(ಪಾದ - ಹೃದಯ - ಮಸ್ತಕೇಷು ಅಷ್ಟಾಕ್ಷರಾದಿ ಮಂತ್ರೈಃ ಅಭಿಮೃಶೇತ್)

ತದಸ್ತು ಮಿತ್ರಾವರುಣಾ ತದಗ್ನೇ ಶಂ ಯೋರಸ್ಮಭ್ಯಮಿದಮಸ್ತು ಶಸ್ತಂ। ಅಶೀಮಹಿ ಗಾಧಮುತ ಪ್ರತಿಷ್ಠಾಂ ನಮೋ ದಿವೇ ಬೃಹತೇ ಸಾಧನಾಯ। ಗೃಹಾವೈ ಪ್ರತಿಷ್ಠಾಸೂಕ್ತಂ। ಗೃಹಾ ಹಿ ಪ್ರತಿಷ್ಠಾ ಪ್ರತಿಷ್ಠಾ। ಉತ್ತಮಾ ಪ್ರತಿಷ್ಠಾ । ಸುಪ್ರತಿಷ್ಠಿತಮಸ್ತು।

ಅತ್ರ ಸ್ಥಿತ್ವಾ ಜಗನ್ಮಾತಃ ಯಾವತ್ಪೂಜಾವಸಾನಕಂ।
ತಾವತ್ ಸಂಪ್ರೀತಿಭಾವೇನ ಬಿಂಬೇಽಸ್ಮಿನ್ ಸನ್ನಿಧೌ ಭವ॥

## ಷೋಡಶೋಪಚಾರಪೂಜಾ ಧ್ಯಾನಮ್

ಅಕ್ಷಮಾಲಾಭಯಾಬ್ಜಾನಿ ಕರೈಃ ಶೂಲಂ ಚ ಬಿಭ್ರತೀಂ।
ಸ್ವರ್ಣರತ್ನಧರಾಂ ದೇವೀಂ ದಿವ್ಯಮೌಕ್ತಿಕಧಾರಿಣೀಂ॥

ಪೂರ್ಣೇಂದು ವದನಾಂ ದೇವೀಂ ಕೋಟಿಸೂರ್ಯಸಮಪ್ರಭಾಂ।
ರಕ್ತಸಂಯುಕ್ತಹಾರಾಂ ಚ ಬ್ರಹ್ಮಸೂತ್ರೇಣ ಶೋಭಿತಾಂ॥

ರುದ್ರಾಣೀಂ ರುದ್ರವಾಮಾಂಗೀಂ ಶಂಕರೀಂ ಲೋಕಶಂಕರೀಂ।
ಸಮಸ್ತಲೋಕಜನನೀಂ ಸ್ವರ್ಣಗೌರೀಂ ನಮಾಮ್ಯಹಂ॥

---

⍝ ಮುದ್ರೆಗಳ ವಿವರಣೆ ಬಗ್ಗೆ ನನ್ನ "ದೇವಪೂಜಾತತ್ವಮ್" ಪುಸ್ತಕ ನೋಡಿರಿ

ಶ್ರೀ ಸ್ವರ್ಣಗೌರ್ಯಂತರ್ಗತ ಶ್ರೀ ಭಾ-ಮು, ಶ್ರೀಜಯಾಪತಿ ಸಂಕರ್ಷಣಾಯ ನಮಃ ಧ್ಯಾಯಾಮಿ।

## ಆವಾಹನಮ್

ಆಗಚ್ಛ ವರದೇ ದೇವಿ ಮರ್ತ್ಯಲೋಕಹಿತೇಚ್ಛಯಾ।
ಸುವ್ರತಂ ಭವತು ಕ್ಷಿಪ್ರಂ ಮಮ ಪೂಜಾಂ ಗೃಹಾಣ ಬೋ॥

ಆವಾಹಯಾಮಿ ತ್ವಾಂ ದೇವಿ ಪೂಜಾರ್ಥಂ ಶಿವವಲ್ಲಭೇ।
ದಯಾಂ ಕುರು ಮಯಿ ಪ್ರೀತ್ಯಾ ಸ್ಥಿರಾ ಭವ ಹರಪ್ರಿಯೇ।
ಶ್ರೀಸ್ವರ್ಣಗೌರ್ಯಂತರ್ಗತ ಶ್ರೀ ಭಾ-ಮು-ಶ್ರೀ ಜಯಾಪತಿ ಸಂಕರ್ಷಣಾಯ ನಮಃ ಆವಾಹಯಾಮಿ।

## ಆಸನಮ್

ಸೂರ್ಯಾಯುತನಿಭಸ್ಫೂರ್ತೇ ಸ್ಫುರದ್ರತ್ನ ವಿಭೂಷಿತಂ।
ರತ್ನಸಿಂಹಾಸನಂ ದೇವಿ ಗೃಹಾಣ ಹರವಲ್ಲಭೇ॥

ಶ್ರೀಸ್ವರ್ಣಗೌರ್ಯಂತರ್ಗತ ಶ್ರೀ ಭಾ-ಮು, ಶ್ರೀ ಜಯಾಪತಿ ಸಂಕರ್ಷಣಾಯ ನಮಃ। ರತ್ನ ಸಿಂಹಾಸನಂ ಸಮರ್ಪಯಾಮಿ।

## ಪಾದ್ಯಮ್

ಸುವಾಸಿತಂ ಜಲಂ ರಮ್ಯಂ ಸರ್ವತೀರ್ಥಸಮುದ್ಭವಂ।
ಪಾದ್ಯಂ ಗೃಹಾಣ ದೇವಿ ತ್ವಂ ಸರ್ವದೇವ ನಮಸ್ಕೃತೇ॥

ಶ್ರೀಸ್ವರ್ಣಗೌರ್ಯಂತರ್ಗತ ಇದಂ ತೇ ಪಾದ್ಯಂ ಸುಪಾದ್ಯಂ।
(ಅಸ್ಮಿನ್ ರಾಷ್ಟ್ರೇ ಶ್ರಿಯಂ ಇತಿ ಮಂತ್ರೇಣ)

## ಆಚಮನೀಯಂ

ಸುವರ್ಣಕಲಶಾನೀತಂ ಚಂದನಾಗರು ಸಂಯುತಾಂ।
ಗೃಹಾಣಾಚಮನಂ ದೇವಿ ಮಯಾ ದತ್ತಂ ಶುಭಪ್ರದೇ॥
ಶ್ರೀ ಸ್ವರ್ಣ ಗೌರ್ಯಂತರ್ಗತ ಶ್ರೀ ಭಾ-ಮು, ಶ್ರೀಜಯಾಪತಿ
ಶ್ರೀಸಂಕರ್ಷಣಾಯ ನಮಃ।ಆಚಮನೀಯಂ ಸಮರ್ಪಯಾಮಿ।

## ಅರ್ಘ್ಯಮ್

ಶುದ್ಧೋದಕಂ ಚ ಪಾತ್ರಸ್ಥಂ ಗಂಧಪುಷ್ಪಾದಿಸಂಯುತಂ।
ಅರ್ಘ್ಯಂ ದಾಸ್ಯಾಮಿ ತೇ ದೇವಿ ಗೃಹಾಣ ಸುರಪೂಜಿತೇ॥

ಶ್ರೀ ಸ್ವರ್ಣಗೌರ್ಯಂತರ್ಗತ ಭಾ-ಮು-ಶ್ರೀ-ಸಂಕರ್ಷಣಾಯ ನಮಃ।
ಹಸ್ತಯೋಃ ಇದಂ ತೇ ಅರ್ಘ್ಯಮರ್ಘ್ಯಂ ಸಮರ್ಪಯಾಮಿ।

## ಮಧುಪರ್ಕಮ್

ದಧ್ಯಾಜ್ಯ ಮಧುಸಂಯುಕ್ತಂ ಮಧುಪರ್ಕಂ ಮಯಾಽಽಹೃತಂ।
ಗೃಹಾಣ ವರದೇ ದೇವಿ ನಮಸ್ತೇ ಭಕ್ತವತ್ಸಲೇ॥

ಶ್ರೀಸ್ವರ್ಣಗೌರ್ಯಂತರ್ಗತ ಶ್ರೀಭಾ-ಮು-ಶ್ರೀಜಯಾಪತಿ-ಶ್ರೀಸಂಕರ್ಷಣಾಯ ನಮಃ। ಮಧುಪರ್ಕಂ ಸಮರ್ಪಯಾಮಿ

## ಪಂಚಾಮೃತಂ✦

ಪಯೋದಧಿ ಘೃತೋಪೇತಂ ಶರ್ಕರಾಮಧುಸಂಯುತಂ।
ಪಂಚಾಮೃತಸ್ನಾನಮಿದಂ ಗೃಹಾಣಾಭೀಷ್ಟದಾಯಕೇ॥

ಆಪ್ಯಾಯಸ್ವ ಸಮೇತು ತೇ - ಇತಿ ಕ್ಷೀರಾಭಿಷೇಕಃ।
ದಧಿಕ್ರಾವ್ಣೋ ಅಕಾರಿಷಂ - ಇತಿ ದಧಿ ಸ್ನಾನಮ್।
ಮಧುವಾತಾ ಋತಾಯತೇ - ಇತಿ ಮಧುಸ್ನಾನಮ್।
ಘೃತಂ ಮಿಮಿಕ್ಷೇ ಘೃತಂ - ಇತಿ ಘೃತಸ್ನಾನಮ್।
ಸ್ವಾದುಃ ಪವಸ್ವ ದಿವ್ಯಾಯ - ಇತಿ - ಶರ್ಕರಾಸ್ನಾನಮ್।
ಯಾಃ ಫಲಿನೀರ್ಯಾಃ ಅಫಲಾ - ಇತಿ ಫಲೋದಕಸ್ನಾನಮ್।

## ಶುದ್ಧೋದಕಸ್ನಾನಮ್

ಗಂಗಾಜಲಂ ಮಯಾಽಽನೀತಂ ಸುವರ್ಣಕಲಶೇ ಸ್ಥಿತಂ।
ಸುಗಂಧದ್ರವ್ಯ ಸಂಯುಕ್ತಂ ಗೃಹಾಣ ದುರಿತಾಪಹೇ॥

---

✦ಪಂಚಾಮೃತವನ್ನು ಮಾಡುವಾಗ ಮೊದಲು ಸಾಲಿಗ್ರಾಮ ಹಾಗೂ ಕೃಷ್ಣ ಪ್ರತಿಮೆಯನ್ನಿಟ್ಟುಕೊಂಡು ಅಭಿಷೇಕಮಾಡಿ ಅಭಿಷೇಕವಾದ ನಂತರ ಹೂವಿನಿಂದ ಹಾಲಿನಲ್ಲಿ ಅದ್ದಿ ಗೌರಿಗೆ ಪ್ರೋಕ್ಷಿಸಬೇಕು. ಹೀಗೆಯೇ ದಧಿ, ಆಜ್ಯ, ಮಧುಗಳಿಂದ ಪ್ರೋಕ್ಷಿಸುವುದು ಪ್ರತಿಮೆ ಇದ್ದರೆ ಅಭಿಷೇಕ ಮಾಡಿದ ಹಾಲಿನಿಂದ ಅಭಿಷೇಕಿಸುವುದು.

